ಯುಗಾದಿ ವಿಶೇಷಾಂಕ

# ಅಪರಂಜಿ

ಮಾರ್ಚಿ

1991

ತಿಳಿನಗೆಯ ಕಾರಂಜಿ



ಪ್ರಕಾಶ್

ಕಮಲಾ ರಾಮಸ್ವಾಮಿ

"ಕೇಫ"

ನಾಗೂಶ್ರೀ ಸೂರಿ

ಶಿವು

ಶಾಂತಾ ರಘು

ಆರತಿ

ದೊಡ್ಡರಂಗೇಗೌಡ

ಅ. ರಾ. ಸೇ.

ಜಿ ಎನ್. ಜಿ.

ಕಪಟಕವಿ

ಪ್ರತಿ : 2 ರೂ. 50 ಪೈ.




ಸಂಪುಟ ೮ ಮಾರ್ಚಿ ೧೯೯೧ ಸಂಚಿಕೆ ೬

ಇಂದು ಯುಗಾದಿ. ಪ್ರಮೋದೂತ ಹಿಂದೆ ಸರಿದು ಪ್ರಜೋತ್ಪತ್ತಿಯನ್ನು ಇದಿರುಗೊಳ್ಳುವ ಸಮಯ. ಯಾಕೆ, ಈಗಿರುವುದೇ ಸಾಲದೇ, ಇನ್ನೂ ಪ್ರಜೋತ್ಪತ್ತಿಯಾಗಬೇಕೇ ಎಂದು ಗಾಭರಿಯಾಗಬೇಡಿ. ಮಧ್ಯ ಪ್ರಾಚ್ಯದಲ್ಲಿನ ಪ್ರಜಾನಾಶ ಯುಗಾದಿ ಹೊತ್ತಿಗಾದರೂ ನಿಂತರೆ, ಒಂದು ಅರ್ಥದಲ್ಲಿ ಪ್ರಜೋತ್ಪತ್ತಿಯಾದಂತೆಯೇ ಅಲ್ಲವೇ ?

ಯುಗಾದಿಯ ಈ ಶುಭ ಸಂದರ್ಭದಲ್ಲಿ ನಮ್ಮ ಎಲ್ಲಾ ಓದುಗರಿಗೂ ಲೇಖಕ, ಲೇಖಕಿಯರಿಗೂ, ಜಾಹೀರಾತುದಾರರಿಗೂ ಹಾಗೂ ಕಾರ್ಯಾಲಯದ ಎಲ್ಲ ಬಂಧುಗಳಿಗೂ ಭಗವಂತನು ಮಂಗಳವನ್ನುಂಟು ಮಾಡಲಿ ಎಂಬುದೇ ಅಪರಂಜಿಯ ಪ್ರಾರ್ಥನೆ.


| | | |
|---|---|---|
| ಗೌರವ ಸಲಹೆಗಾರರು<br>ಶ್ರೀ ಅ. ರಾ. ಸೇ.<br>ಶ್ರೀ ಶೇಷಗಿರಿ<br><br>ಸಂಪಾದಕ :<br>**ಶಿವಕುಮಾರ್** | ಚಂದಾ ವಿವರ :<br>ಬಿಡಿ ಪ್ರತಿ :<br>2 ರೂ. 50 ಪೈ.<br>ವಾರ್ಷಿಕ ಚಂದಾ :<br>25 ರೂ.<br>ಆಜೀವ ಚಂದಾ :<br>2-50 ರೂ. | ವಿಳಾಸ :<br>ಅಪರಂಜಿ ಕಾರ್ಯಾಲಯ<br>36, 6ನೆಯ ಮುಖ್ಯ ರಸ್ತೆ<br>ಮಲ್ಲೇಶ್ವರಂ<br>ಬೆಂಗಳೂರು 560003<br>ಕೆಲಸದ ವೇಳೆ :<br>ಬೆಳಗ್ಗೆ 8ರಿಂದ 10 ಗಂಟೆಯ ವರೆಗೆ |

ಈ ಸಂಚಿಕೆಯಲ್ಲಿ




ಮುದ್ರಣ : ಇಂಪ್ರೆಷನ್ಸ್, ಮಲ್ಲೇಶ್ವರಂ, ಬೆಂಗಳೂರು

ದೂರವಾಣಿ; 342144

# ಅಪರಂಜಿ

(ತಿಳಿನಗೆಯ ಕಾರಂಜಿ)

ಸಂಪುಟ ೮ ಮಾರ್ಚ್ ೧೯೯೧ ಸಂಚಿಕೆ ೬

ಯಾರಿಗೆ ಬ್ರಹ ಕ್ಷತ್ರಗಳೆರಡೂ, ಅನ್ನವೋ, ಮೃತ್ಯುವು ಉಪ್ಪಿನ ಕಾಯಿಯೋ, ಆತನು ಎಲ್ಲಿರುವನೆಂದು ಯಾರು ಹೀಗೆ ತಿಳಿದಿರುವರು ?

—ಕಠ

ಪರಮಾತ್ಮನೇ ಈ ಮಂತ್ರದಲ್ಲಿ ಹೇಳಿರುವ ಊಟ ಮಾಡುವವನು. ಈ ಜಗತ್ತನ್ನು ಸೃಷ್ಟಿಸುವವನೂ ಸಂಹರಿಸುವವನೂ ಅವನೇ. ಅವನಿಗೆ ಕರ್ಮಫಲದ ಭೋಗವಿಲ್ಲ ಎಂದು ಉಪನಿಷತ್ತು ಹೇಳುತ್ತದೆ.

'ಕೊಂದು ಪಗೆಯಲ್ಲೀತ, ಸಲಹಿದನೆಂದು ಮೋಹಿತನಲ್ಲ, ಪರಮಾನಂದಮಯ ಎಂದು ಮಹಾಭಾರತ ಸ್ಮೃತಿಯಲ್ಲಿ ಹೇಳಿದೆ.

ಈಗ ಲೋಕವು 'ಬಲಾಜ ಪೃಥ್ವೀ' ಎನ್ನುವುದನ್ನು ಪರೀಕ್ಷಿಸಲು ಹೊರಟಿದೆ. ವಿಜ್ಞಾನದ ಮಾರಕ ಶೋಧನೆಗಳ ಆವಿಷ್ಕಾರ ಮಾಡಿ, ಅವನ್ನು ಮಾರಾಟ ಮಾಡಿ. ತಮ್ಮ ಮೇಲೇ ಪ್ರಯೋಗವಾಗುವುದನ್ನು ಪೌರುಷವಾದಿಗಳು ಕಾಣುತ್ತಿದ್ದಾರೆ. ಸಣ್ಣ ಮೀನನ್ನು ನುಂಗಿ ಬದುಕುವ ದೊಡ್ಡ ಮೀನು ಸಮುದ್ರದಲ್ಲಷ್ಟೇ ಅಲ್ಲ, ಭೂಮಿಯ ಮೇಲೂ ಇದೆ. ಇದು ಮಾತ್ಸ್ಯ ನ್ಯಾಯ ಎಂದು ಸಮರ್ಥಿಸಿಕೊಳ್ಳುತ್ತಿದೆ.

ಪರ್ಯಾವರಣದ ನಾಶವು ಚಳವಳಿಕಾರರಿಗೆ ಮಾತ್ರ ಕಳವಳವನ್ನುಂಟುಮಾಡುತ್ತಿದೆ. ಬಲಾಢ್ಯ ದೊರೆಗಳಿಗಲ್ಲ.

ವಿಜ್ಞಾನದ ಕಹಿ ಫಲ ನಮ್ಮ ಬಾಯಿಗೇ ಬರುತ್ತಿದೆ ಪಕ್ಷಗಳ ಬಾಲ ಹಿಡಿದು ವಾದಿಸುವವರೇ ದೊಡ್ಡವರು.

ಹೊಸ ಯುಗಾದಿ, ಈ ಹಾಲಾಹಲವನ್ನು ನಾಶಪಡಿಸಲಿ. ವಿವೇಕದ ತಿಳಿ ನಗೆ ಎಲ್ಲೆಡೆ ಹಬ್ಬಲಿ ಎಂದು ಅಪರಂಜಿ ಪ್ರಾರ್ಥಿಸುತ್ತಾಳೆ.



ಪ್ರಕಾಶ್

---

ಮಂಡಲ್ ಗಲಭೆ, ಅಯೋಧ್ಯೆಯ ಕಷ್ಟಗಳನ್ನು ಸದ್ಯಕ್ಕೆ ದೂರ ಮಾಡಿದ್ದಕ್ಕೆ ಸದ್ದಾಂ ಅವರಿಗೆ ಧನ್ಯವಾದಗಳು !

* * *

ಈ ಟಿ. ವಿ.ನಲ್ಲಿ ಬೆಳಗ್ಗೆ ತೋರಿಸ್ತಾರಲ್ಲ ವ್ಯಾಯಾಮ ಮಾಡೋರ್ನ, ಅವರಿಗ್ಯಾರಿಗೂ ವ್ಯಾಯಾಮದ ಅಗತ್ಯ ಇರೋ ಹಾಗೇ ಕಾಣುಲ್ಲವಲ್ಲ !

* * *

ಸುರಂಗ ಮಾರ್ಗ ನಿರ್ಮಾಣ ಯೋಜನೆಗೆ ಬೆಂಗಳೂರು ನಗರ ಪಾಲಿಕೆ ಅಸ್ತು.

— ಪತ್ರಿಕೆ

ಅದು 'ಸುರಂಗ' ಆದಾಗ ನೋಡೋಣ !

* * *

ಪಶು ವೈದ್ಯ ಸೇವಾ ಇಲಾಖೆ ಪುನರ್ರಚನೆ.

— ಸುದ್ದಿ

ಪಶುಗಳೆಲ್ಲ ಮೌನವಾಗಿ ಸಮ್ಮತಿಸಿದವಂತೆ !

* * *

ಬೇಂದ್ರೆ ಸ್ಮಾರಕಕ್ಕಾಗಿ ಕನ್ನಡಿಗರ ಒಕ್ಕೊರಲಿನ ಒತ್ತಾಯಕ್ಕೆ ಕರೆ.

— ಸುದ್ದಿ

ಕನ್ನಡಿಗರಿಗೆ ಒರಲಿ ಒರಲಿ, ಗಂಟಲೇ ಕೂತುಹೋಗಿದೆ!

* * *

ತೈಲದಿಂದ ಇಷ್ಟು ಘರ್ಷಣೆ ಆಗುತ್ತೆಂದು ಯಾರು ನಿರೀಕ್ಷಿಸಿದ್ದರು?

* * *

ಗಲ್ಫಿನ ಗಲ್ಫ್ ಕಡಿಮೆಯಾಗಲಿ ಅಂತ ಅಪರಂಜಿ ಹಾರೈಸಿದಳಂತೆ!

* * *

ಸರ್ಕಾರಿ ವೈದ್ಯರ ಖಾಸಗಿ ಪ್ರ್ಯಾಕ್ಟಿಸ್‌ಗೆ ಕತ್ತರಿ.

— ಪತ್ರಿಕೆ

ಸರಿ, ಇದೂ ವಿಜಯನಗರದ ಉಕ್ಕಿನ ಕಾರ್ಖಾನೆಯಂತೆ, ಗಾಳಿ ಸುದ್ದಿ ಅಷ್ಟೆ!!

* * *

ಬೆಂಗಳೂರಿನಲ್ಲಿ ಪಿಕೆಟಿಂಗ್; ನೂರಾರು ಮಂದಿ ಸೆರೆ,

— ಸುದ್ದಿ

ಆಧುನಿಕ ಗಾಂಧಿಗಳು!



# ಅನುಪಮಾ - ಶ್ರದ್ಧಾಂಜಲಿ

ಕಮಲಾ ರಾಮಸ್ವಾಮಿ

---

"ಕಂಪ್ಲೇಂಟ್ಸ್ ವಿಭಾಗ ತಾನ?"

"ಹೌದು ಮ್ಯಾಡಂ".

"ನೋಡಿ 641333 ಕೆಟ್ಟು ಕೂತಿದೆ. ಆಗಲೇ ಹದಿನೈದು ದಿನಗಳಾಗಿವೆ. ಅವರಿಗೆ ಫೋನ್ ಬಹು ಅಗತ್ಯ ದಯವಿಟ್ಟು ಬೇಗ ರಿಪೇರಿ ಮಾಡಿಸ್ತೀರಾ?"

"641333ನೇ ? ಅದು ಅನುಪಮಾ ನಿರಂಜನ ಅವರ ನಂಬರ್ ಅಲ್ವೇ ?"

"ಹೌದಪ್ಪಾ"

"ಮ್ಯಾಡಂ, ಅವರು ಈಗ ಏನು ಬರೀತಾ ಇದ್ದಾರೆ? ನಾನು ಅವರ ಅಭಿಮಾನಿ".

"ನೀವು ಅವರ ಅಭಿಮಾನಿಗಳಾಗಿರೋದು ಒಳ್ಳೇದೇ ಆಯಿತು. ಅವರ Phone ಯಾವಾಗ ರಿಪೇರಿ ಮಾಡಿಸ್ತೀರಪ್ಪಾ ?"

"ಅಯ್ಯೋ. ಅದು ಕೇಬಲ್ ಫಾಲ್ಟ್ ಆಗಿದೆ ಮ್ಯಾಡಂ. ಕೇಬಲ್ ಬಂದಾಗ ರಿಪೇರಿ. ನಮ್ಮ ಡಿಪಾರ್ಟ್‌ಮೆಂಟ್ ಗೊತ್ತಿಲ್ವೇ ?"

ನಡೆದದ್ದನ್ನು ಅನುಪಮಾ ಅವರಿಗೆ ಹೇಳಿ "ಈಗ ಏನು ಬರೀತಾ ಇದ್ದೀರ ಅಂತ ಬೇರೆ ಪ್ರಶ್ನೆ ಕೇಳಿದ್ರು" ಅಂತ ಹೇಳಿದೆ.

"ಹದಿನೈದು ದಿನಗಳಿಂದ ಟೆಲಿಫೋನ್ ಡಿಪಾರ್ಟ್‌ಮೆಂಟ್‌ಗೆ ಪತ್ರ ಬರೀತಾ ಇದ್ದಾರೆ ಅಂತ ಹೇಳ್ಬೇಕಾಗಿತ್ತು ಕಮಲಾ" ಅಂತ ಹೇಳಿ ನಕ್ಕಿದ್ದರು.

*            *            *

ಅನುಪಮಾ, ಲೀಲಾ ಮತ್ತು ನಾನು ಒಮ್ಮೆ ಸೌತ್ ಎಂಡ್‌ನಲ್ಲಿರುವ ಸಿಲ್ವರ್ ಸ್ಟಾರ್ ಹೊಟೆಲಿಗೆ ಹೋಗಿದ್ದೆವು. ಊಟ ಮಾಡಿ ಹೊರಗೆ ಹೊರಡುವ ಸನ್ನಾಹ ದಲ್ಲಿದ್ದಾಗ, ವೇಟರ್ ಒಬ್ಬ ನನ್ನನ್ನು ಪಕ್ಕಕ್ಕೆ ಕರೆದು ಕೇಳಿದ—"ಅವ್ರು ಅನುಪಮಾ ನಿರಂಜನ ಅಲ್ವೇ ? ಕಥೆ ಕಾದಂಬರಿ ಬರಿಯೋರು?"

"ಹೌದು".

ಆತನ ಮುಖ ಅರಳಿತು.

"ಅವರೇನಾದ್ರೂ ಹೊಟೆಲ್ ಕೆಲಸಗಾರರ ಬಗ್ಗೆ ಬರಿಯೋದಾದ್ರೆ, ನಾನು ಬೇಕಾದ ಮಾಹಿತಿ ಕೊಡೋಕ್ಕೆ ಸಿದ್ಧ ಅಪ್ರಿಗೆ ದಯವಿಟ್ಟು ಹೇಳ್ತೀರಾ ? "

ಹೊರಗೆ ನಿಂತಿದ್ದ ಅನುಪಮಾಗೆ ಇದನ್ನು ಹೇಳಿದಾಗ "ಹೌದೇ ! ನನ್ನ ಪುಸ್ತಕ ಗಳ ಹಿಂದೆ ನನ್ನ ಚಿತ್ರ ಇರೋದ್ರಿಂದ ಎಲ್ಲೂ ತಪ್ಪಿಸ್ಕೊಳ್ಳೋ ಹಾಗಿಲ್ಲ" ಅಂತ ಹೂ ನ ಗೆಯೊಂದಿಗೆ ನುಡಿದಿದ್ದರು.

*　　　*　　　*

ಡಿಸೆಂಬರ್ ತಿಂಗಳಿಂದ ಅವರ ಆರೋಗ್ಯ ಇಳಿಮುಖವಾಗತೊಡಗಿತ್ತು. ನಿರಂಜನರಿಗೂ ಸಹಾ ಮತ್ತೊಮ್ಮೆ ಹುಷಾರು ತಪ್ಪಿತ್ತು. ಆಗ ತಾನೇ ಚೇತರಿಸಿ ಕೊಳ್ಳುತ್ತಿದ್ದರು. ಸಂಜೆ ಇಬ್ಬರನ್ನೂ ನೋಡಲು ಹೋದೆ. ಸಂಜೆಗತ್ತಲು ಆವರಿಸು ತ್ತಿತ್ತು. ಮನೆಯ ಮುಂಬಾಗಿಲು ತೆರೆದಿತ್ತು. ಒಳಗೆ ಅನುಪಮಾ ಒಬ್ಬರೇ ಕುಳಿತಿ ದ್ದರು. ಅಂಗೈ ಮೇಲೆ ಮುಖವಿಟ್ಟು ಏನನ್ನೋ ದಿಟ್ಟಿಸುತ್ತಿದ್ದರು. ಮೆಲ್ಲಗೆ "ಅನುಪಮಾ" ಎಂದೆ.

"ಓ, ನಿನ್ನೆ ಬೆಳಗ್ಗೆ ಎರಡು ಬಾರಿ ನಿನ್ನ ಜ್ಞಾಪಿಸಿಕೊಂಡೆ. ಫೋನ್ ಮಾಡ್ತೀಯೇನೋ ಅಂದುಕೊಳ್ತಿದ್ದೆ. ನೀನೇ ಬಂದೆಯಲ್ಲಾ, ಒಳ್ಳೇದಾಯಿತು"

"ನಿರಂಜನರ ಆರೋಗ್ಯ ಸುಧಾರಿಸಿದ್ದು ಕೇಳಿ ನೆಮ್ಮದಿಯಾಯಿತು. ನೀವು ಹೇಗಿದ್ದೀರಾ?" ನಿರಂಜನರಿಗೆ ಹುಷಾರು ತಪ್ಪಿದರೆ ನನ್ನ ವ್ಯಾಧಿ ಓಡಿಹೋಗುತ್ತೆ. ಬಿಡುವಿನ ವೇಳೆಯಲ್ಲಿ ಸುಸ್ತಾದಾಗ ನಾನು ಒಬ್ಬ ಪೇಷಂಟ್ ಎಂಬುದು ನೆನಪಿಗೆ ಬರುತ್ತೆ" ನಸುನಗುತ್ತಾ ಆಕೆ ನುಡಿದರು.

"ಎಂದೂ ನೀವು ಹೀಗೆ ಕುಳಿತುಕೊಳ್ಳುವುದಿಲ್ಲವಲ್ಲಾ. ಇಂದೇಕೆ, ಓದದೇ, ಬರೆಯದೇ ಇದ್ದೀರಿ ? "

"ಇವತ್ತು ಏಕೋ ಎಲ್ಲಾ ಸಾಕು ಎನ್ನಿಸಿದೆ. ಸಾಕಷ್ಟು ಪರೀಕ್ಷೆಗಳನ್ನು ಇಬ್ಬರೂ ಇದಿರಿಸಿದ್ದೀವೆ. ಇನ್ನಾದರೂ ನೆಮ್ಮದಿ ಬೇಡವ ? ಇಷ್ಟೇ ಆರೋಗ್ಯವಿದ್ದರೂ ಸಾಕು. ಇನ್ನು ಎಮರ್ಜೆನ್ಸಿಗಳು ಬೇಡಮ್ಮಾ ! " ಅಂತ ಹೇಳಿ ಎಂದೂ ನಿಟ್ಟುಸಿರು ಇಡದಿದ್ದ ಆಕೆ ಅಂದು ನಿಟ್ಟುಸಿರಿಟ್ಟರು.

"Updikeರ 'S' ಕಾದಂಬರಿ ತಂದುಕೊಡುತ್ತೇನೆ. ಓದಿ. ಚೆನ್ನಾಗಿದೆ" ಅಂದೆ.

"ಈಚೆಗೆ ಬೇಗ ಬೇಗ ಓದಲು ಆಗುವುದಿಲ್ಲ. ಬರೆಯಬೇಕಾದ್ದು ಬಹಳವಿದೆ. ಅಬ್ಬಕ್ಕನ ಕಥೆ ಪೂರ್ತಿಯಾಗಿಲ್ಲ. ನಿಧಾನವಾಗಿ ಹಿಂತಿರುಗಿಸಿದರೆ ಆಗಬಹುದೇ?"

"ಓಹೋ, ಮೂರು ತಿಂಗಳಾದರೂ ಪರವಾಗಿಲ್ಲ" ಎಂದು ಹೇಳಿ ಬಂದೆ.

*                    *                    *

ಮೂರು ತಿಂಗಳಾಗಲು ವಿಧಿ ಇಚ್ಛಿಸಲಿಲ್ಲ. ಹಿಂದಿನ ರಾತ್ರಿ ಚಿರನಿದ್ರೆಯನ್ನಪ್ಪಿದ ಅನುಪಮಾರವರನ್ನು ನೋಡಲು ಫೆಬ್ರುವರಿ ಹದಿನೈದರಂದು ಅವರ ಮನೆಗೆ ಹೋದೆ. ನೋವನ್ನು, ಸಾವನ್ನು ಕೊನೆಗೂ ಗೆದ್ದ ಶಾಂತ ಮುಖಭಾವ. ಗೆಳತಿಯ ಮುಖದಲ್ಲಿ ಆ ಶಾಂತತೆಯನ್ನು ಕಂಡು ದಶಕಗಳು ಸರಿದಿದ್ದವು. ನಿಂತು ನೋಡುತ್ತಿದ್ದಂತೆ ಜುವಾನ್ ರಾಮೋನ್ ಜಿಮೆನೆಜ್‌ನ ಕವನದ ಸಾಲುಗಳು ನೆನಪಿಗೆ ಒಂದವು.

...and I will leave. But the birds will stay, singing;
and my garden will stay, with its green tree,
with its water well.
Many afternoons the skies will be blue and placid
and the bells in the belfry will chime,
as they are chiming this very afternoon.

The people who have loved me will pass away,
and the town will burst anew every year
But my spirit will always wander nostalgic
in the same recondite corner of my flowery garden.

ಅನುಪಮಾ ಅವರು ಕೃಷಿ ಮಾಡಿದ ಚಿಂತನೆಗಳ ಹೂದೋಟದಲ್ಲಿ ಅವರ ಚೇತನ ಸದಾ ಕಾಲ ವಿಹರಿಸುತ್ತಿರಲಿ.



# ಯಾತ್ರಿಕರ ಪತ್ರ

"ಶೇಷ"

ಶಂಖದ ಹಳ್ಳೀಲಿ ಕೆಲವೇ ದಿನದ ಹಿಂದೆ—ನಮ್ಮ ರಿಪಬ್ಲಿಕ್ ಡೇ—ಗಣರಾಜ್ಯ ದಿನಾಚರಣೆ—ಸಮಾರಂಭ ನಡೆದಂತಿತ್ತು. ತಳಿರು ತೋರಣಗಳು ಇನ್ನೂ ಅರ್ಧಂಬರ್ಧ ಮಾತ್ರ ಹರಿದಿದ್ದವು. ಬಾಳೇ ಕಂಬಗಳನ್ನೂ ದನಗಳು ಪೂರ್ತಿ ತಿಂದಿರಲಿಲ್ಲ. ರಾಜ, ನಾನು, ಚಂದಿ—ನಮ್ಮ ವಾಹನಗಳಿಂದಿಳಿದು—ಊರಿನ 'ಮಹಾತ್ಮಾ ಕಾಫಿ ಕ್ಲಬ್ಬಿಗೆ' ನುಗ್ಗಿದೆವು. ಇಡ್ಲಿ, ಚಟ್ನಿ ರುಚಿಯಾಗಿದ್ದವು. ಕಾಫಿ ಕುಡಿಯುತ್ತಿರುವಾಗ—ರಾಜ ಧಿಡೀರನೆ—

"ಲ್ರೋ, ಆ ಮೂಲೇಲಿ ನೋಡ್ರೋ!" ಅಂದ.

ಬಿಲ್‌ಖುಲ್ ಮಹಾತ್ಮಾಗಾಂಧಿ! ಅದೇ ತಲೆ–ಅದೇ ಕಿವಿಗಳು–ಅದೇ ಕಣ್ಣುಗಳು–ಅದೇ–ಒಟ್ಟಿನಲ್ಲಿ ತದ್ರೂಪು! ಬಿಲ್‌ಖುಲ್ ಗಾಂಧೀಜೀನೇ! ಕಾಫಿ ಕುಡಿದು–ದುಡ್ಡು ಕೊಡುವಾಗ ಹೊಟೇಲು ಮಾಲೀಕನನ್ನು ಆ ಗಾಂಧಿ ಆ ಸಾಮಿಯ ಬಗ್ಗೆ ವಿಚಾರಿಸಿದೆವು.

"ಆತನದೊಂದು ದೊಡ್ಡ ಕತೆ ಸ್ವಾಮಿ. ಇಲ್ಲೇ ಸ್ಕೂಲಿನ ಹತ್ತಿರ ಮಾಬಲಯ್ಯ ಮಾಸ್ತರಿದ್ದಾರೆ. ಅವರನ್ನು ಕೇಳಿ – ಎಲ್ಲಾ ವಿಷಯ ಗೊತ್ತಾಗುತ್ತೆ" ಅಂದರು.

ಮಹಾಬಲಯ್ಯ ಮಾಸ್ತರು ನಮ್ಮನ್ನು ತುಂಬಾ ಆದರದಿಂದ ಸ್ವಾಗತಿಸಿದರು. ರಿಟೈರ್ಡ್ ಹೈಸ್ಕೂಲು ಹೆಡ್‌ಮಾಸ್ಟರಾದ ಅವರು–ಸ್ವಂತೂರು ಶಂಖದಹಳ್ಳಿಯಲ್ಲಿ ಗಣ್ಯವ್ಯಕ್ತಿಯಾಗಿ ನೆಲೆಸಿದ್ದರು. ಅವರ ಇಬ್ಬರು ಗಂಡು ಮಕ್ಕಳೂ ಹೊರ ನಾಡುಗಳಲ್ಲಿದ್ದು ವರ್ಷದಲ್ಲಿ ಎರಡು ಮೂರು ವಾರಗಳು ರಜೆ ಪಡೆದು ಶಂಖದ ಹಳ್ಳಿಯಲ್ಲಿ ಕುಟುಂಬದ ಜೊತೆ ಇರುವುದು ವಾಡಿಕೆ ಎಂದು ಹೇಳಿದರು. ಅವರ ಮಗಳು, ಅಳಿಯ–ಬೆಂಗಳೂರಲ್ಲಿರುವುದಾಗಿಯೂ ಹೇಳಿದರು. ನಮ್ಮ ಭೇಟಿಯ ಉದ್ದೇಶ ತಿಳಿದುಕೊಂಡ ಮೇಲೆ ನಮಗೆ ಮೊದಲು ಕಾಫಿ ಕುಡಿಸಿ–ಆಮೇಲೆ

ಮಧ್ಯಾಹ್ನದ ಊಟಕ್ಕೂ ನಿಲ್ಲಿಸಿಕೊಂಡರು. ನಾವು ಮಹಾತ್ಮಾ ಕಾಫಿ ಕ್ಲಬ್ಬಿನಲ್ಲಿ ನೋಡಿದ್ದ ಗಾಂಧಿಯ ಬಗ್ಗೆ ಹೇಳಿದರು. "ಗಣರಾಜ್ಯ ದಿನಾಚರಣೆ ಇನ್ನೂ ಒಂದೂವರೆ ಎರಡು ತಿಂಗಳಿದೆ ಎನ್ನುವಾಗಲೇ ಶಂಖಿದಪಳ್ಳಿಯ ತಾಲ್ಲೂಕ್ ಬೋರ್ಡ್ ಮೆಂಬರು—ಗುಂಡಪ್ಪ ಎಂದಿಟ್ಟುಕೊಳ್ಳಿ—

ನನ್ನಲ್ಲಿಗೆ ಬಂದು–ಮಾಸ್ತರೇ ಈ ಬಾರಿ ನಮ್ಮೂರಿನಲ್ಲಿ ಗಣರಾಜ್ಯೋತ್ಸವ ವನ್ನು ಭರ್ಜರಿ ನಡೆಸಬೇಕು. ಅಂಗೂ—ಒಂದು ವ್ಯತ್ಯಾಸ ರೀತಿಯಲ್ಲಿ ನಡಸಬೇಕು— ನಮಗೆ ಸ್ವಾತಂತ್ರ್ಯ ತಂದುಕೊಟ್ಟ ದೇಶದ ತಂದೆ ಗಾಂಧೀ ಮಹಾತ್ಮರನ್ನ ಯಾಕೆ ನಾವು ಮೆರವಣಿಗೆ ಮಾಡಿಸ್ಬಾರ್ದು?–ಅಂತ ಕೇಳಿದ. ನಾನು ಅವಾಕ್ಕಾದೆ. ಗಾಂಧೀಜೀ ಕೊಲೆಯಾಗಿ ನಲವತ್ತು ವರ್ಷಗಳೇ ಆದುವೆಂದು ಗುಂಡಪ್ಪನಿಗೆ ಜ್ಞಾಪಿಸಿದೆ. ಗುಂಡಪ್ಪ ಹೇಳಿದ. ಅದು ಗೊತ್ತು ಬಿಡಿ. ನಮ್ಮ ಭರಣಪ್ಪನಿಗೆ ಗಾಂಧೀ ಪಾರ್ಟ್ ಒಪ್ತದೆ ಹಾಗೂ ಭರಣ—ವೇಷ ಕಟ್ತ್ಕೋನೇ–ಅಂತ ವಾದಿಸಿದ.

"ಭರಣಪ್ಪ—ಗುಂಡಪ್ಪನ ಸೇವಕ ಮತ್ತು ಗುಂಡಪ್ಪನ ಕಳ್ಳಭಟ್ಟಿ ತಯಾರಿಕೆ ಯಲ್ಲಿ ಕೆಲಸಗಾರನೆಂದು ಊರಿನವರೆಲ್ಲರಿಗೂ ಗೊತ್ತಿದ್ದ ವಿಷಯ. ಹಾಗೂ ಆಗಾಗ ಮುದಿ ದನಗಳನ್ನೂ ಕಳ್ಳತನದಲ್ಲಿ ಭರಣಪ್ಪ ಕಸಾಯಿಖಾನೆಗೆ ಮಾರುವನೆಂಬ ಅಪಾದನೆಯೂ ಇತ್ತು. ಪ್ರತಿ ನಿತ್ಯ–ಸಂಜೆ ಸಾರಾಯಿ ಕುಡಿದು ಊರಿನ ಅಶ್ವತ್ಥ ಕಟ್ಟೆ ಅಥವಾ ಸ್ಕೂಲಿನ ವರಾಂಡಾದಲ್ಲಿ ಬಿದ್ದು ರಾತ್ರಿ ಕಳೆಯುವವ. ಅಂಥವನಿಗೆ ಪೂಜ್ಯ ಗಾಂಧೀಜೀಯವರ ಪವಿತ್ರ ವೇಷ ಹಾಕುವುದಕ್ಕೆ ಯಾವ ರೀತಿ ಒಪ್ಪಿಕೊಳ್ಳಲಿ ?

"ಆದರೆ ಗುಂಡಪ್ಪನೋ ಹಠಮಾರಿ. 'ನೀವು ಸ್ವಲ್ಪ ಭರಣಪ್ಪನಿಗೆ ತಯಾರಿ ಕೊಡಿ. ಗಾಂಧೀ ಬಗ್ಗೆ ಸ್ವಲ್ಪ ವಿಷ್ಯ ತಿಳ್ಸಿ ಬಿಡಿ–ಸಾಕು. ನಾಳೆ ನಿಮ್ಮಲ್ಲಿಗೆ ಭರಣ ಬರ್ತಾನೆ' — ಅಂತ ಹೇಳಿ ಗುಂಡಪ್ಪ ಹೊರಟೇ ಹೋದ. ಮಾರನೇ ದಿನವೇ–ಭರಣಪ್ಪ–ನನ್ನ ಮುಂದೆ ಬಂದು ನಿಂತು ದೂರದಿಂದಲೇ ನಮಸ್ಕ ರಿಸಿದ—ಹೆಂಡದ ವಾಸನೆ ನನ್ನ ಮೂಗಿಗೆ ಬಡೀತಿತ್ತು. ಧಣಿಯೋರು ಕಳ್ಸಿದ್ರು ನಿಮ್ತಾವ'–ಅಂದ. 'ನೀನು ಗಣರಾಜ್ಯ ದಿನಾಚರಣೆ ದಿನ ಗಾಂಧಿ ವೇಷ ಹಾಕ ಬೇಕಂತಪ್ಪ'–ಅಂದ. ಔದ್ರು–ನಾ ಬೇಡಾಂದ್ರೂ ಝುಲುಂ ಮಾಡ್ತಾರೆ– ಕಾರಣ ನಾನು ಗಾಂದೀ ತರಾನೇ ಇದ್ದೀನಂತ್ರ. ನಾನ್ಯಾವ ಯೇಶಾನಾದ್ರೂ ಆಕ್ತೀನ್ರಾ—

ಅಂದ. 'ಭರಣಪ್ಪ — ಅದಕ್ಕೆ ಸ್ವಲ್ಪ ನಿನಗೆ ತಯಾರಿ ಬೇಕು. ಅದನ್ನ ಗುಂಡಪ್ಪನನ್ನ ಕೈಲಿಟ್ಟಿದ್ದಾರ' — ಅಂದೆ. 'ಆಗ್ಲೀಳ್ರ ಏಳೇ ದಿನದಾಗೆ ಆಯಪ್ಪನ ಪಾತ್ರಾನ ಕಲ್ತುಬಿಡ್ತೀನೆ' ಅಂದ. ನಾನು ನಗಲೂಲಾರದೆ ಅಳಲೂಲಾರದೆ ಭರಣಪ್ಪ ನಿಗೆ ಸ್ಪಷ್ಟಪಡಿಸಬೇಕಾಯ್ತು. 'ನೀನು ಗಾಂಧೀ ವೇಷ ಹಾಕೋಕೆ ಇನ್ನೂ ಆರು ವಾರ ಕಾಲವಿದೆ. ಪ್ರತಿ ನಿತ್ಯ ಸಂಜೆ ಒಂದು ಘಂಟೆ ಕಾಲ ಇಲ್ಲಿಗೆ ಬಂದು ಆ ಮನುಷ್ಯನ ಬಗ್ಗೆ ತಿಳ್ಕೋಬೇಕು. ಆ ರೀತಿ ಮಾಡೋದಾದ್ರೆ ನನತ್ರ ಬಂದು ಕಲಿ. ಇಲ್ಲದಿದ್ದರೆ — ನೀನುಂಟು ನನ್ನ ಧಣಿ ಉಂಟು' ಅಂದು ಹೇಳಿ

ಬಿಟ್ಟೆ. ಗುಂಡಪ್ಪನ ದ್ವೇಷ ಕಟ್ಟಿಕೊಳ್ಳಲಾರದೆ — ಮನಸ್ಸಿಲ್ಲದ ಮನಸ್ಸಿನಿಂದ ಭರಣಪ್ಪ ಒಪ್ಪಿಕೊಂಡ. ನಾನು ನನ್ನ ಹೊಸ ಶಿಷ್ಯನಿಗೆ ಗಾಂಧೀಜೀಯವರ ಆತ್ಮ ಕಥೆ — ಸತ್ಯ ಶೋಧನೆ ಪುಸ್ತಕವನ್ನು ಅವನೊಂದಿಗೆ ಓದಿ ಅರ್ಥ ಹೇಳಲು ಶುರು ಮಾಡಿದೆ. ಒಂದು ವಾರದವರಿವಿಗೆ ಸ್ವಲ್ಪ ಉದಾಸೀನದಿಂದಲೇ ಕೇಳಿದ. ಬರಬರ್ತಾ ಗಾಂಧಿಯುವರ ಬಗ್ಗೆ ಭರಣಪ್ಪ ಪ್ರಶ್ನೆ ಕೇಳಲು ಶುರು ಮಾಡಿದ. ಆ ಸಮಯಕ್ಕೆ ಕಾಕತಾಳೀಯದಂತೆ — ನನ್ನ ಮಗಳು, ಅಳಿಯ ಒಂದು ಟಿ. ವಿ. — ವಿ. ಸಿ. ಪಿ.ಯೊಡನೆ ಬಂದಿಳಿದರು. ಮತ್ತೂ ಆಶ್ಚರ್ಯದ ಸಂಗತಿ ಎಂದರೆ — ಅವರು ಗಾಂಧಿ ಚಿತ್ರದ ಕ್ಯಾಸೆಟ್ಟೊಂದಿಗೆ ಬಂದಿದ್ದು. ಆ ಚಲನ ಚಿತ್ರವನ್ನು ನಾವೆಲ್ಲ ನೋಡುವಾಗ — ಭರಣಪ್ಪ ನಮ್ಮ ಜೊತೆಗಿದ್ದ. ನನ್ನ ಮಗಳು, ಅಳಿಯ ಎರಡು ದಿನಗಳಿದ್ದು ಹೊರಟು ಹೋದರು,

„ಒಂದು ದಿನ ಗುಂಡಪ್ಪ ಬಂದ. 'ಮೇಷ್ಟ್ರೇ — ನಿವ್ಮಾವ ಭರಣನ್ನ ಕಳ್ಸಿ ನಾನು ಕೆಟ್ಟೆ'—ಅಂದೆ. 'ಯಾಕಪ್ಪ ?' ಕೇಳಿದೆ. 'ಮತ್ತೇನ್ರ ? ಇನ್ನು ನನ್ನ ವ್ಯಾಪಾರದಲ್ಲಿ ಆ ಜೇಕೂಫ ಸೇರೊಲ್ಲವಂತೆ. ಕಸಾಯಿ ವ್ಯಾಪಾರ ಮಾಪಾಪ ವಂತೆ. ತಾನೇ ಗಾಂಧೀಂತ ತಿಳ್ಕೊಳ್ಳೋಕೆ ಶುರು ಮಾಡೌನೆ' — ಅಂದ.

ಹೋಗೋವಾಗ—ಆ ಅಲ್ಕ ಹ್ಯಾಗೆ ಗಾಂಧೀ ಪಾರ್ಟ್ ಆಕ್ತಾನೆ ನೋಡ್ಕೊಂತೀನಿ' ಅಂದು ಹೋದ ಗುಂಡಪ್ಪ. ಗಣರಾಜ್ಯೋತ್ಸವ ಮಾಮೂಲಿನಂತೆ—ಗುಂಡಪ್ಪನ ಮೇಲ್ವಿಚಾರಣೆಯಲ್ಲಿ ನಡೆಯಿತು. ಆದರೆ ಗಾಂಧಿ ವೇಷ ಮಾತ್ರ ಕಾಣಲಿಲ್ಲ. ಭರಣಪ್ಪ ಆ ಸಮಯದಲ್ಲಿ ಪೋಲೀಸ್ ಠಾಣೆಯಲ್ಲಿದ್ದನಂತೆ. ಕಳ್ಳ ಸಾರಾಯಿ ಸರಬರಾಜು ಕೇಸಿನಲ್ಲಿ ಭರಣಪ್ಪ ಸಿಕ್ಕಿ ಬಿದ್ದಿದ್ದನಂತೆ. ದೂರು ಕೊಟ್ಟಿದ್ದವರು ತಾಲೂಕ್ ಬೋರ್ಡ್ ಸದಸ್ಯರೊಬ್ಬರಂತೆ. ಎರಡು ದಿನಗಳು ಕಳೆದ ಮೇಲೆ ಭರಣಪ್ಪ ಲಾಕಪ್ಪಿನಿಂದ ಬಿಡುಗಡೆಯಾಗಿ ಹೊರಕ್ಕೆ ಬಂದ—"

ಮಹಾಬಲ ಮಾಸ್ಟರ ಮನೆಯ ಗೇಟು ತೆರೆದ ಶಬ್ದವಾಯ್ತು. ಒಂದು ಹೊರೆ ಕಟ್ಟಿಗೆ ಹೊತ್ತುಕೊಂಡು ಬಂದು ವರಾಂಡಾ ಮೂಲೆಯಲ್ಲಿಟ್ಟು — ಕೈ ಕಟ್ಟಿಕೊಂಡ್ನು ನಿಂತ ಆಸಾಮಿ—ಅದೇ ಗಾಂಧಿ ತದ್ರೂಪಿನವ. ಮಾಸ್ಟರು ಎದ್ದು—ಅವನ ಕೈಗೆ ಸ್ವಲ್ಪ ಹಣ ಕೊಟ್ಟರು. ನಮಗೆ ಅರಿವಿಲ್ಲದೆ — ರಾಜ, ಚಂದಿ, ನಾನು ಅವನಿಗೆ ಸೆಲ್ಯೂಟ್ ಹೊಡೆದೆವು.

"ಭರಣಪ್ಪ—ಇವರು ಪಟ್ಟಣದವರು...." ಎಂದರು.

ಭರಣಪ್ಪ ನಮಗೂ ನಮಸ್ಕರಿಸಿ ಹೊರಟು ಹೋದ. ಮಾಸ್ಟರು ನಮ್ಮ ಕಡೆ ನೋಡಿದರು. ನಾವು ಮಾತನಾಡುವ ಸ್ಥಿತಿಯಲ್ಲಿರಲಿಲ್ಲ. ಅವರಿಗೆ ನಮಸ್ಕರಿಸಿ ನಾವೂ ತಲಕಾಡು ದಾರಿ ಹಿಡಿದೆವು.

"ಗಾಂಧೀನ ಅರ್ಥ ಮಾಡಿಕೊಂಡೋನು—ನಮ್ಮ ದೇಶದಲ್ಲೆಲ್ಲಾ ಭರಣಪ್ಪ ಒಬ್ಬನೇ ಕಣ್ರೋ"—ಅಂದ ಚಂದಿ.

***

# ಪತ್ತೆ ನಾಯಿ

ನಾಗೂಶ್ರೀ ಸೂರಿ

---

ಹೋಗಿರೋದೆಲ್ಲ ಬರೀ Cashಉ ಮತ್ತು ಒಡವೆಗಳು .... ಅವು ಮತ್ತೆ ಸಿಕ್ಕಿದ ಹಾಗೇನೆ..., ಪ್ಚ್, ಒಂದು ಮೂವತ್ತು ಸಾವಿರ ಹಜಾಮತ್ತು ನನ್ನ ಹಣೇಲಿ ಬರೆದಿತ್ತು ಅಷ್ಟೆ, ಅಂತ ಕಪನೀಪತಿ ಬಡಕೋತಾ ಇದ್ದ. ಆದರೆ ಕೇಸನ್ನ Investigate ಮಾಡೋಕ್ಕೆ ಅಂತ ಬಂದಿದ್ದ ಇನ್ಸ್‌ಪೆಕ್ಟರ್ ಸಿದ್ದಪ್ಪನವರಿಗೆ ತುಂಬಾನೆ Hopesಉ. ಸ್ಟೀಲ್ ಬೀರುವಿನ ಎರಡೂ ಬಾಗಿಲುಗಳ ಮೇಲೆಲ್ಲ ಬೇಕಾದಷ್ಟು Finger-printsಗಳನ್ನ ಬಿಟ್ಟು ಹೋಗಿದ್ದು ಮಾತ್ರ ಅಲ್ಲದೆ ಕಳ್ಳತನಕ್ಕೆ ಬಂದಿದ್ದೋನು ಇನ್ನೂ ಒಂದು ರೀತೀಲಿ ಬೇಕೂಫತನ ಮಾಡಿಕೊಂಡು ಹೋಗಿದ್ದ..... ಅಲ್ಲ ಅಷ್ಟೆಲ್ಲ ಬೆಲೆ ಬಾಳೋ ಸಾಮಾನನ್ನ ತಗೊಂಡು ಹೋಗುತ್ತಿರುವಾಗ, ರೂಮಿನ ಬಾಗಿಲ ಮೇಲೆ ತಗಲಿ ಹಾಕಿತ್ತಲ್ಲ ಕಪನೀಪತಿ ಜೀನ್ಸು ಮತ್ತು ಟಿ-ಷರ್ಟು, ಅವನ್ನ ಹಾಗೇ ಬಿಟ್ಟು ಹೋಗಿದ್ದರೆ ಚೆನ್ನಾಗಿರತಾ ಇತ್ತು.... ಆಯ್ತು, ಏನೋ Imported ಐಟಂಗಳು, ಚೆನ್ನಾಗಿದ್ದವು ಅಂತ ಅನ್ನಿಸಿದ್ರೆ ಹಾಗೇ ತಗೊಂಡು ಹೋಗಿದ್ರೂ ಪರವಾಗಿಲ್ಲ ಇರಲಿಲ್ಲ. ಆದರೆ ಅವನು ಅದೆಂಥಾ ಭಕರಾಸೋ.. ಅಲ್ಲೇ ಆಗಲೇ ಅದನ್ನ ಹಾಕಿಕೊಂಡೇ ಹೊರಗೆ ಹೋಗಬೇಕೆ ? ಆ ಗಲಾಟೇಲಿ ತಾನು ಹಾಕಿಕೊಂಡು ಬಂದಿದ್ದ ಕೊಳೆ-ಪ್ಯಾಂಟು, ಷರಟುಗಳನ್ನ ಅಲ್ಲೇ ಮೂಲೇಲಿ ಬಿಸಾಡಿ ಹೋಗಿದ್ದ—ಪೋಲೀಸಿನವರಿಗೆ ಅದು ಸಿಕ್ಕಿದ್ರೆ ಏನಾಗಬಹುದೂ ಅನ್ನೋ ಯೋಚನೆ ಕೂಡ ಇಲ್ಲದೆ.

ಅಷ್ಟೆಲ್ಲಾ tell-tale ಅನ್ನೋ clueಗಳನ್ನ ಬಿಟ್ಟು ಹೋಗಿರೋನು ಇನ್ನೂ ಏನಾದರೂ ಬಿಟ್ಟಿದಾನೋ ಅಂತ ನೋಡೋದಕ್ಕೆ ಸಿದ್ದಪ್ಪನವರು ಆ ಬಟ್ಟೆ ಗುಡ್ಡೇನ Swagger stickನಿಂದ ಎತ್ತಿ ನೋಡಿದರು. ಹಾಗೆ ಎತ್ತೋವಾಗ ಜೇಬಿನಿಂದ ಏನೋ ಬಿದ್ದ ಹಾಗೆ ಆಯಿತು. ನೋಡಿದರೆ ಅಂಥಾದ್ದು ಏನೂ ಇರಲಿಲ್ಲ. ಒಂದು ಅರ್ಧ ಕಟ್ಟು ಬೀಡಿ, ಕಡ್ಡಿ ಪೊಟ್ಣ, ಮತ್ತೆ ಅದೆಂಥದೊ ಅರ್ಧ ತಿಂದು ಮಿಕ್ಕದ್ದು.... ಖಾರಾ ಬನ್ನೋ ಇಲ್ಲಾ ಪಲ್ಯದ ಬನ್ನೊ ಅಂತಾರಲ್ಲ ಅದು.

ಆದರೆ ಆ ಬಟ್ಟೇ ಗುಡ್ಡೇನೆ ಸಾಕಲ್ಲ. ಆಸಾಮಿೂನ ಸಿಕ್ಕಿ ಹಾಕಿಸೋಕೆ ? ಏನಿಲ್ಲ, Dog squadಗೆ ಫೋನ್ ಮಾಡೋದು, ಒಂದು ನಾಯೀನ ಕರಸೋದು, ಅದರ

ಕೈನಲ್ಲಿ ಆ ಬಟ್ಟೇಗಳನ್ನ ಮೂಸಿ ನೋಡಿಸೋದು, ಅದು ಕರಕೊಂಡು ಹೋದ ಕಡೆ ಹೋಗೂೋದು .... ಅದು ಹಿಡಿಕೊಟ್ಟವನ್ನ ಒಳಗೆ ಹಾಕ್ಕಿಕೊಳ್ಳೋದು, ಚೆನ್ನಾಗಿ ತದಕೋದು....

ಥತ್ ಅಲ್ಲೇ ಇರೋದು ಕಿರಿಕ್ಕು ಈವಾಗ ! ... ಮುಂಚೆ ಅಂದರೆ Squadನಲ್ಲಿ ಎರಡೋ ಮೂರೋ ನಾಯಿ ಅಂತ ಇದ್ದಾಗ ಯಾವ ಮೂರು ಕಾಸಿನ ಕೇಸೂ ಅಂದರೂನು ಸರಿಯೇ, ಏನೂ ತಕರಾರಿಲ್ಲದೆ ಬರೋವು, ತಮ್ಮ ಕೈಲಾದಷ್ಟು ಮಾಡಿ ಬಿಟ್ಟು ಹೋಗೋವು. ಆದರೆ ಈವಾಗ ?.,. ಹೆಚ್ಚು ಕಡಿಮೆ ಒಂದು ಡಜನ್ನೇ ಇರ ಬಹುದು. ಆದರೆ ಅವು ಹೋಗೋ ಕೇಸುಗಳು ಯಾವ ಥರದ್ದು? VVIP ಸೆಕ್ಯೂರಿಟಿ, ....bomb scare...narcotics ಅಂತ ಅಂದ್ರೆ ಮಾತ್ರ ಬರುತ್ವೆ ಹೊರತು ಈ ಥರದ್ದು ಇಪ್ಪತ್ತು ಮೂವತ್ತು ಸಾವಿರದ್ದು ಕಳ್ಳತನಾ ಅಂದರೆ ? ಉಹುಂ...Sorry, not free.

ಛೆ, ಎಂಥಾ ಒಳ್ಳೆ ಕೇಸು ಒಂದು ನಾಯೀ ಕುನ್ನಿ ಸಿಗಲಿಲ್ಲ ಅನ್ನೋ ಕಾರಣ ಕ್ಕಾಗಿ ಕೈ ಬಿಟ್ಟು ಹೋಗತಾ ಇದೆಯಲ್ಲ ಅಂತ ಒದ್ದಾಡ್ತಾ ಇದ್ದ ಹಾಗೇನೆ ಸಿದ್ದಪ್ಪ ನವರಿಗೆ ರಂಗಾಚಾರಿ ಜ್ಞಾಪಕ ಬಂದದ್ದು.

*   *   *

ರಂಗಾಚಾರಿ ಒಂದು ಕಾಲದಲ್ಲಿ ಇಡೀ Stateನಲ್ಲೇ ಹೆಸರುವಾಸಿಯಾಗಿದ್ದ Dog handler. ಎಲ್ಲಿ ಏನು ಆಗಲೀ ಅವನೂ, ಅವನು ತಯಾರು ಮಾಡಿದ ನಾಯೀನೂ ಹಾಜರಾಗದೇ ಇದ್ದರೆ ಆಗತಾನೇ ಇರಲಿಲ್ಲ, ಹಾಗಿತ್ತು ಪರಿಸ್ಥಿತಿ. ಆದರೆ ಕೊನೆಗೆ ಅದೇ ಅವನಿಗೆ ತಂದದ್ದು ಕುತ್ತನ್ನ, ಅವನ ಕಮ್ಯಾಂಡೆಂಟ್ ಇದ್ದ ನಲ್ಲ ಶಂಕರನ್ ನಾಯರ್, ಅವನಿಗೆ ಹೊಟ್ಟೆ ಉರಿ—ಪೇಪರ್ ಪೇಪರ್‌ನಲ್ಲೆಲ್ಲಾ ಎಲ್ಲಿ ನೋಡಿದ್ರೂ ರಂಗಾಚಾರಿ ಮಾತೇ ಹೊರತು, ಅವನ ಬಾಸು ಇಂಥಾವರು, ನಾಯರ್ ಅಂತ ಒಬ್ಬರಿದ್ದಾರೆ ಅಂತ ಒಂದು ಮಾತೂ ಬರೆಯೊಲ್ಲವಲ್ಲ ಅಂತ.... ನಾಲಕ್ಕು ಜನರೆದುರಿಗೆ ರಂಗಾಚಾರೀನ ನಾಲಾಯಕ್ಕು ಅಂತ ಇನ್ನು ಅನ್ನಿಸದೇ ಇದ್ರೆ ಆಗೋಲ್ಲ ಅಂತ ಹೊಂಚು ಹಾಕತಾ ಇದ್ದ. ಆದರೆ ಷೋಕಾಸ್ ನೋಟೀಸು, ಸಸ್ಪೆನ್ಷನ್ ಅಂತ ಮಾಡೋಣ ಅಂದರೆ ರಂಗಾಚಾರಿ ಬಲೇ ಹುಷಾರು... ಅಷ್ಟು ದೂರದಿಂದಲೇ ವಾಸನೇ ಕಂಡು ಹಿಡಿದು ಬಿಟ್ಟು ಅದಕ್ಕೇನೋ ರೆಡಿ ಮಾಡಿ ಟ್ಟುಕೊಂಡಿರೋನು.

ಕೊನೇಗೂ ನಾಯರ್ ಒಂದು Brilliant idea ಮಾಡಿದ. ಏನಿಲ್ಲ, ಕಾರ್ಪೊರೇಷನ್ನಿನ Dog poundಗೆ ಹೇಳಿ ಕಳಿಸಿ, ಅಲ್ಲಿ Death-rowನಲ್ಲಿದ್ದ ಒಂದು ಕಂತ್ರೀ ನಾಯೀನ ತರಿಸಿಕೊಂಡ. ಅದನ್ನ ರಂಗಾಚಾರಿ ತಲೆಗೆ ಕಟ್ಟಿ—"ಇನ್ನು ಮೇಲೆ

ಅಲ್ಸೇಷಿಯನ್ನು, ಡಾಲ್ಮೇಷಿಯನ್ನು ಅಂತ Vested breedಗಳನ್ನ ಬಿಟ್ಟು Local ನಾಯಿಗಳನ್ನೇ Squadನಲ್ಲಿ Fry ಮಾಡಬೇಕೂ ಅಂತಿದ್ದೀವಿ.... ಕಂತ್ರೀ Dog^S for country crimes ... ಪ್ಪ ಹ್ವ? ಆ ಪ್ರಾಜೆಕ್ಟಿಗೆ ನಿಮ್ಮನ್ನ ಸೆಲೆಕ್ಟ್ ಮಾಡಿದ್ದೀವಿ" ಅಂತ ಆರ್ಡರು ಮಾಡಿದ.

ರಂಗಾಚಾರಿ ಒಂದೇ ಸಮನೆ ಹೊಡಕೊಂಡ – "ಎಲ್ಲಾದರೂ ಉಂಟೇ ಸಾರ್ ಈ ಬೀದಿ ನಾಯಿಗಳನ್ನ Squad dogಗಳೂ ಅಂತ ಮಾಡೋಕ್ಕೆ ಆಗತ್ತಾ ಸಾರ್? ನೀವು ಸುಮ್ಮನೆ ನನ್ನನ್ನ Harass ಮಾಡೋಕ್ಕೆ ಹೀಗೆ ಮಾಡ್ತಾ ಇದ್ದೀರ" ಅಂತ. ಆದರೆ ನಾಯರ್ ಕೇಳಬೇಕಲ್ಲ — "ಆರ್ಡರ್‌ನ defy ಮಾಡಿದ್ರಿ ಅಂತ Disciplinary action ತಗೋಬೇಕೋ ಹ್ಯಾಗೆ?" ಅಂತ ಹೆದರಿಸಿದ.

ಸರಿ, ಆಯಿತು. ಏನಿದ್ರೂ ಇನ್ನು ಎರಡು ವರ್ಷ ತಾನೆ ಸರ್ವೀಸು ಇರೋದು. ಹಾಗೋ ಹೀಗೋ ತಳ್ಳಿಕೊಂಡು ಹೋದರೆ ಆಯಿತು. ಸುಮ್ಮನೆ ಗಲಾಟೆ ಮಾಡಿಕ್ಕೊಂಡು ನಾಳೆ ಗ್ರಾಚುಯಿಟೀ ಯಾಕೆ ಕಳಕೋಬೇಕು—ಅಂದುಕೊಂಡು ರಂಗಾಚಾರಿ ಕರ್ಮಯೋಗ ಶುರೂ ಮಾಡಿಕೊಂಡ. ಕೆಲಸ ಏನೋ ಮಾಡತಾನೆ—ಸಂಬಳಕ್ಕೆ ಮೋಸ ಆಗದಿರಲಿ ಅಂತ ಅಷ್ಟೆ. ಆದರೆ ಆಸಕ್ತಿ ಮಾತ್ರ ಇಲ್ಲ. ಅವನು ಅದೇನು ಹೇಳಿಕೊಡತಾನೋ ಆ ನಾಯಿ ಅದೇನು ಕಲಿತುಕೊಳ್ಳತಾ ಇದೆಯೋ, ಯಾವನಿಗೆ ಗೊತ್ತು ?

* * *

ಅಲ್ಲ ಇಂಥ ಒಳ್ಳೆ ಕೇಸಿಗೆ ಈ ಕಂತ್ರೀ ನಾಯಿ ಬಿಟ್ಟರೆ ಬೇರೆ ಸಿಗತಾ ಇಲ್ಲವಲ್ಲ ಅಂತ ಬೇಜಾರಾದ್ರೂ, 'ಉದ್ರ ಉಂಡೇಸು ತೆಗೀ ಕದಾನ' ಅಂತಾರಲ್ಲ, ಆ ರೀತಿ ಸಿದ್ದಪ್ಪನವರು Squadಗೆ ಫೋನ್ ಮಾಡಿಸಿದ್ದೂ ಆಯಿತು, ಅರ್ಧ ಘಂಟೆ ಆಗೋದರೊಳಗೆಲ್ಲ, ರಂಗಾಚಾರಿ ನಾಯೀನ ಕರಕೊಂಡು ಬಂದದ್ದೂ ಆಯಿತು.

ಸಿದ್ದಪ್ಪನವರೂ ಎಷ್ಟೊಂದು ಕಂತ್ರಿ ನಾಯಿಗಳನ್ನ ನೋಡಿಲ್ಲ ? ಅವುಗಳಲ್ಲೂ ಕೆಲವು ಬಹಳ ಲಕ್ಷಣವಾಗಿ ಇರತ್ವೆ. ಆದರೆ ಈ ರಂಗಾಚಾರಿ ನಾಯಿ ? ಥತ್, ಅದೇನು ಅವಲಕ್ಷಣ ? ರಂಗಾಚಾರಿಗೇನೋ ವಯಸ್ಸಾಗಿದೆ, ಜೊತೆಗೆ ಈ ಒಂದು ಎರಡು ವರ್ಷಗಳಿಂದ ಸ್ವಲ್ಪ activity ಕಡಿಮೆ ಇದೆ. ಹಾಗಾಗಿ ಅವನಿಗೆ ಸ್ವಲ್ಪ ಬೊಜ್ಜು ಬಂದಿರೋದು ಅಂಥಾ ಆಶ್ಚರ್ಯ ಏನೂ ಇಲ್ಲ. ಆದರೆ ಆ ನಾಯಿ.... ಅದಕ್ಕೆ ಯಾಕೆ ಅಷ್ಟೊಂದು ಹೊಟ್ಟೆ ? ...ಹುಂ ಪುಗಸಟ್ಟೆ ಪೋಲೀಸ್ ಊಟ ತಿನ್ನತಾ ಇದ್ರೆ, ಇನ್ನು ಏನಾಗತ್ತೆ ?

ಆದರೆ ಅವರಿಗೆ ಹೀಗೆ ಅನ್ನಿಸಿದ್ದು ಅದು ಕಾಂಪೊಂಡು ಒಳಗೆ ಬರೋ ತನಕಾ ಅಷ್ಟೆ. ಆ ಮೇಲೆ ನೋಡಬೇಕು ಅದನ್ನ...ಯಾವ ಆಲ್ಸೇಷನ್ನು, ಡಾಲ್ಮೇಷಿಯನ್ನು ಯಾವುದೂ ಬೇಡ ಅದರ ಮುಂದೆ... Excitement ಹೆಚ್ಚಾಗಿ ಹೋಗಿ, ರಂಗಾಚಾರೀನೂ ಎಳಕೊಂಡು ಸೀದಾ ರೂಮಿಗೆ ನುಗ್ಗಿತು. ಅಲ್ಲಿ ಬಿದ್ದಿತ್ತಲ್ಲ ಆ ಕಳ್ಳನ ಬಟ್ಟೆ, ಅದನ್ನ ಮೂಸಿ ಮೂಸಿ ನೋಡನ್ತೆ ಎಗರಿ ಎಗರಿ ಬೀಳತ್ತೆ... ಮತ್ತೆ ಮೂಸಿ ಮೂಸಿ ನೋಡತ್ತೆ.

ಎಲ್ಲಾ ಚೆನ್ನಾಗಿ ವಾಸನೆ ನೋಡಿದ ಮೇಲೆ ನಾಯಿ ಮನೆಯಿಂದ ಆಚೆ ಕಡೆ ಓಡಿತು. ಮಾಮೂಲು ಪರಿಸ್ಥಿತೀಲಿ ಅಂದರೆ, ಸಿದ್ದಪ್ಪನವರು ಈ ಪೋಲಿಸು ನಾಯಿಗಳು, ಪತ್ತೇ ಕೆಲಸಕ್ಕೆ ಹೋಗೋ ಪ್ಯಾದೆಗಳು, ಅವರುಗಳ ಹಿಂದೆ ಹೋಗತಾ ಇರಲಿಲ್ಲ. ಆದರೆ ಇವತ್ತು ಆ ನಾಯೀನ ನೋಡಿ ಅವರಿಗೂ ಸ್ವಲ್ಪ ಮಸ್ತಿ ಹತ್ತಿದ ಹಾಗಾಗಿತ್ತು. ಹಾಗಾಗಿ ಅವರೂನೂ ಆದರ ಹಿಂದೆ ಏದುಸಿರು ಬಿಟ್ಟುಕೋತಾ ಓಡತಾ ಹೋದರು—Every dog has its day ಅನ್ನೋದು ಇದಕ್ಕೇ ಇರಬೇಕು ಅಂತ ಮನಸ್ಸಿನಲ್ಲೇ ಅಂದುಕೊಳ್ಳತ್ತಾ.

ಆದರೆ ಆದು ಅಲ್ಲಿ ಇಲ್ಲಿ ಅಂತ ಓಡಿ ಕೊನೇಗೆ ಅಗ್ರಹಾರದ ಕಡೆಗೆ ತಿರಗಿಕೊಂಡಾಗ ಅವರಿಗ ಸ್ವಲ್ಪ ಆಶ್ಚರ್ಯವೇ ಆಯಿತು. ಅವರಿಗೆ ತಿಳಿದ ಹಾಗೆ ಅಲ್ಲಿ ಇದ್ದೋರೆಲ್ಲ ಏನಿದ್ರೂ ಪುರೋಹಿತರ ಕೆಲಸ ಮಾಡೋರು ಇಲ್ಲಾ ಸಂಸ್ಕೃತಾನೋ ಕನ್ನಡಾನೊ ಹೇಳಿಕೊಡೋ ಪಂಡಿತರುಗಳು, ಅಂಥವರು... ಅಂಥಾ ಕಡೇ ಕಳ್ಳರು ಇರೋದು ಅಂದರೆ ನಂಬೋದಕ್ಕೆ ಆಗೊಲ್ಲವಲ್ಲ... ಹುಡುಕಿದರೆ ಒಂದಿಷ್ಟು ಜನ ಮೃಗಳ್ಳರು ಸಿಗಬಹುದು ಅಷ್ಟೇ.

ಆ ನಾಯಿ ಅವರುಗಳನ್ನೆಲ್ಲಾ ಯಾವ ಯಾವದೋ ಗಲ್ಲಿ ಗಲ್ಲಿ ತಿರಗಿಸಿ ಕೊನೆಗೆ ಮೇನ್ ರೋಡಿಗೆ ಕರಕೊಂಡು ಬಂತು. ಆ ರೋಡ್ ಮಾತ್ರ ಸಿದ್ದಪ್ಪನವರಿಗೆ ಸ್ವಲ್ಪ ಪರಿಚಯ. ಬೇಕಾದಷ್ಟು ಸಲ ಜೀಪಿನಲ್ಲಿ ಆ ಕಡೆ ತಿರುಗಾಡೋವಾಗ, ಅಲ್ಲಿರೋ ಹಳೇ ಕಾಲದ ದೊಡ್ಡ ದೊಡ್ಡ ಮನೆಗಳನ್ನ, ಇನ್ನೂ ಹಳೇ ಕಾಲದ ಥರದಲ್ಲೇ ಇರೋ ಅಂಗಡೀಗಳನ್ನ ನೋಡೋದು ಅಂದರೆ ಅವರಿಗೆ ತುಂಬಾ ಇಷ್ಟ. ಈ ಮಕ್ಕೀಜಾಗಳೂ, ರಹೇಜಾಗಳೂ ಅಂತ ಬಂದು ಊರಲ್ಲಿರೋ ಹಳೇ ಕಾಲದ ಮನೆಗಳನ್ನೆಲ್ಲಾ ಒಂದೊಂದಾಗಿ "ಚಲೇಜಾ" ಅಂತ ಓಡಿಸ್ತಾ ಇರೋ ಈ ಕಾಲದಲ್ಲೂ, ಇನ್ನೂ ನಮ್ಮ ಥರದ್ದು ಅನ್ನೋ ಈ ಮನೆಗಳೂ ಈ ಅಂಗಡೀಗಳೂ ಉಳಕೊಂಡು ನಿಂತಿದೆಯಲ್ಲ ಅಂತ ಒಂದು ರೀತಿ ಸಮಾಧಾನ.

ಕೊನೆಗೆ ಆ ನಾಯಿ ಆ ಲೈಟ್ ಕಂಬದ ಮುಂದೆ, ಇತ್ತಲ್ಲ ಆ ದೊಡ್ಡ ಹೆಂಚಿನ ಮನೆ ಮತ್ತೆ ಅದಕ್ಕೆ ಸೇರಿದ ಹಾಗೆ ಅದೆಂಥದೋ ಹಳೆ ಕಾಲದ ಅಂಗಡಿ, ಆದರ

ಮುಂದೆ ಬಂದು ಒಂದೇ ಸಮ ಹೊಡಕೊಳ್ಳೋಕೆ ಶುರು ಮಾಡಿದಾಗ ಸಿದ್ದಪ್ಪನವರು ಅಂದುಕೊಂಡರು, ಅಹ್ಹಾ, ಗಿರವಿ ಅಂಗಡಿ ಇರಬೇಕು, ಕದ್ದೋದ್ದೀನ ಮಾಲು ತಗೊಂಡು ಇಲ್ಲಿ ಬಂದಿದ್ದ ಅಂತ ಕಾಣತ್ತೆ, ಅದಕ್ಕೇ ವಾಸನೆ ಹಿಡಕೊಂಡು ನಾಯಿ ನಮ್ಮನ್ನ ಇಲ್ಲಿಗೆ ಕರಕೊಂಡು ಬಂದಿದೆ. ಕಪನೀಪತಿಯವರೂ ಇಲ್ಲಿ ಈಗ ಇದ್ದಿದ್ರೆ ಈಗಲೇ Identify ಮಾಡಿಸಬಹುದಾಗಿತ್ತಲ್ಲ!

ಆದರೆ ಅಂಗಡೀನ, ಅಂಗಡೀ ಆತನ್ನ ನೋಡಿದ್ರೆ ಹಾಗೆ ಕಾಣಿಸೊಲ್ಲವಲ್ಲ. ಸುಮಾರು ಐವತ್ತೊ ಅರವತ್ತೋ ವಯಸ್ಸಿರಬಹುದು. ಸ್ವಲ್ಪ ಮಾಸಿದ ಬಟ್ಟೇನೆ ಆದರೂ ಮುಖದಲ್ಲಿ ಒಳ್ಳೆ ಕಳೆ. ಹಣೇ ಮೇಲೆ ಕೆಂಪು ನಾಮ. ಯಾರೂ ಗಿರಾಕಿಗಳು ಇಲ್ಲ ಅನ್ನೋದಕ್ಕೋ ಏನೊ ಯಾವದೋ ಸ್ತೋತ್ರ ಹೇಳಕೋತಾ ಇದ್ದವರು ಸಿದ್ದಪ್ಪನವರು ಬಂದಿದ್ದು ನೋಡಿ ನಿಲ್ಲಿಸಿ ಏನು ಬೇಕಾಗಿತ್ತು ಅನ್ನೋ ಥರ ಮುಖ ಮಾಡಿಕೊಂಡರು.

ಈ ಮನುಷ್ಯ, ಈ ಅಂಗಡಿ—ಕಪನೀಪತಿ ಅವನ ಮನೆ House break-in ...ಒಂದಕ್ಕೊಂದು ಸಂಬಂಧ? ಸಾಧ್ಯಾನೆ ಇಲ್ಲ.

ಮತ್ತೆ ಆ ನಾಯಿ ಯಾಕೆ ವಾಸನೆ ಹಿಡಕೊಂಡು ಇಲ್ಲೀ ತನಕ ಓಡಿಕೊಂಡು ಬಂದಿದೆ?

ಸ್ವಲ್ಪ ಸುಧಾರಿಸಿಕೊಂಡು ನೋಡಿದಾಗಲೇ ಅಂಗಡಿ ಬಾಗಿಲ ಹತ್ತಿರ ಇದ್ದ ಬೋರ್ಡು ಕಾಣಿಸಿದ್ದು:

**ಹಾಸನ ಅಯ್ಯಂಗಾರ್ಸ್ ಬೇಕರಿ**
**ಇವತ್ತಿನ ಸ್ಪೆಷಲ್ಲು: ಬಿಸಿ ಪಲ್ಯದ ಬನ್ನು**

**ಅನರ್ಥ ಕೋಶ**

ತಿಂಗಳು : ಸಂಬಳ ಸಿಗಬೇಕಾದರೆ, ದುಡಿಯಬೇಕಾದ ಕಾಲಾವಧಿ.

ತಾಳ್ಮೆ : ಸೇಡು ತೀರಿಸಲು ಉಪಾಯ ತೋರದೇ ಇದ್ದಾಗ.

ತಾಳಿ ಕಟ್ಟಬೇಕೋ ಬೇಡವೊ ಎಂಬ ಪ್ರಶ್ನೆಗೆ ನಮ್ಮ ಉತ್ತರ: ತಾಳಿ

# ಕಡಲ ತೀರದ ಕಿನ್ನರ ಕೇರಿ

ಶಿವ

---

**ಸು**ಮಾರು ಎರಡು ದಶಕಗಳ ಹಿಂದಿನ ಮಾತು.

ಅಂದು ಬೆಳಗ್ಗೆ ನನಗೆ ಎಚ್ಚರವಾದಾಗ ಐದೂವರೆ ಗಂಟೆ. ಅಲಾರಂ ಏನೂ ಇಟ್ಟಿರಲಿಲ್ಲ. ಬೆಳಕು ಹರಿಯುತ್ತಲೇ ಕಡಲ ಗಲ್ ಹಕ್ಕಿಗಳ ಅವಿರತ ಕೂಗಾಟ ಪ್ರಾರಂಭವಾಗಿತ್ತು. ಅಟ್ಲಾಂಟಿಕ್ ಸಾಗರದ ಗಂಭೀರ ಮೊರೆತದ ಹಿನ್ನೆಲೆಯಲ್ಲಿ ಈ ಗಲ್‌ಗಳ ವಿಚಿತ್ರ ಕೂಗು ಮೋಜೆನಿಸಿತ್ತು. ಅವುಗಳ ಕೂಗು ಮೂಲತಃ ಕಾಗೆಗಳ 'ಕಾ' ಧ್ವನಿಯನ್ನೇ ಹೋಲುತ್ತಿದ್ದರೂ, ನಮ್ಮ ದೇಶದ ಕಾಗೆಗಳ ಕೂಗಿನಲ್ಲಿನ 'ರ ಕಾರ ಗಲ್ ಹಕ್ಕಿಗಳ ಕೂಗಿನಲ್ಲಿ ಇರುವುದಿಲ್ಲ. (ನಮ್ಮ ಕಾಗೆಗಳು ಸಾಮಾನ್ಯ ಅಭಿಪ್ರಾಯದಂತೆ 'ಕಾ' ಎನ್ನುವುದಿಲ್ಲ. 'ಕ್ರಾ ಎನ್ನುತ್ತವೆ. ಬೇಕಾದರೆ ಒಮ್ಮೆ ಪರೀಕ್ಷಿಸಿ). ಐದೂವರೆಗೆ ಬೆಳ್ಳನೆ ಬೆಳಕಾಗಿತ್ತು. ಆರು ಗಂಟೆಗೆ ಸಂಗಡಿಗರೊಡನೆ ಸಮುದ್ರ ತೀರದಲ್ಲಿ ಅಲೆದಾಡುವ ಕಾರ್ಯಕ್ರಮ. ಬೇಗ ಬೇಗ ಸಿದ್ಧತೆಯಲ್ಲಿ ತೊಡಗಿದೆ.

ಆಗ ಈಸ್ಟರ್ ರಜೆಯ ದಿನಗಳು. ಬ್ರಿಟನ್ನಿನಲ್ಲಿ ವ್ಯಾಸಂಗ ಮಾಡುತ್ತಿದ್ದ ಬೇರೆ ಬೇರೆ ದೇಶಗಳ, ಸುಮಾರು 60ಕ್ಕೂ ಮಿಕ್ಕಿದ ವಿದ್ಯಾರ್ಥಿ ಸಮೂಹ ನ್ಯೂ ಕೀ ಯಲ್ಲಿ ನೆರೆದಿತ್ತು. ಬ್ರಿಟಿಷ್ ದ್ವೀಪಗಳ ಭೌಗೋಳಿಕ ಆಕಾರವನ್ನು ಊಹಿಸಿಕೊಂಡರೆ ದಕ್ಷಿಣದ ಎಡ ತುದಿಯಲ್ಲಿ ಬಾಲದಂತಿರುವ ಕಾರ್ನ್‌ವಾಲ್ ಕೌಂಟಿಯ ಒಂದು ಸಣ್ಣ ಊರು ನ್ಯೂ ಕೀ. ನಮ್ಮ ಮಂಗಳೂರಿಗಿಂತ ಚಿಕ್ಕ ಊರಾದರೂ, ಖ್ಯಾತ ಪ್ರವಾಸೀ ಕೇಂದ್ರವಾದ್ದರಿಂದ ನ್ಯೂ ಕೀಯಲ್ಲಿ ಹೇರಳವಾಗಿ ಹೋಟೆಲುಗಳು, ತಂಗುದಾಣಗಳು ಕಾಣಸಿಗುತ್ತದೆ. ಹೊರ ದೇಶಗಳಿಂದ ಬಂದ ಬಡ ವಿದ್ಯಾರ್ಥಿಗಳಿಗೆ ಹಲವು ದಿನಗಳ ಮಟ್ಟಿಗಾದರೂ ಇಂತಹ ಪ್ರವಾಸಿ ತಾಣದಲ್ಲಿ ಬಂದು ಇರುವ ಸೌಲಭ್ಯ ದೊರಕಲು ಬ್ರಿಟನ್ನಿನ ಸಾಂಸ್ಕೃತಿಕ ಸಂಸ್ಥೆಯಾದ ಬ್ರಿಟಿಷ್ ಕೌನ್ಸಿಲ್ ಮುಖ್ಯ ಕಾರಣ.

ಅಂದು ನಮ್ಮ ನ್ಯೂ ಕೀ ಪ್ರವಾಸದ ಕೊನೆಯ ದಿನ.ಕಾರ ್ನವಾಲ್‌ನ ವಿವಿಧ ಪ್ರೇಕ್ಷಣೀಯ ಸ್ಥಳಗಳನ್ನು ನೋಡುವುದರಲ್ಲಿ ಹಿಂದಿನ ಐದು ದಿನಗಳು ಐದು ನಿಮಿಷ

ಗಳಂತೆ ಕಳೆದು ಹೋಗಿದ್ದವು. 'ಜಮೈಕ ಇನ್' 'ರೆಬೆಕ್ಕಾ ಕಾದಂಬರಿಗಳ ರಂಗ ಭೂಮಿಯಾದ ಕಾರ್ನ್‌ವಾಲ್ ನಿಜಕ್ಕೂ ಅತ್ಯಂತ ಮನಮೋಹಕ ನಾಡು. ಟ್ರೂರೋ ದಲ್ಲಿನ ಭವ್ಯ ಕೆಥಿಡ್ರಲ್, ಮೈನಾಕ ಪರ್ವತದಂತೆ, ಸಮುದ್ರವನ್ನು ಸೀಳಿ ಮೇಲೆದ್ದು ನಿಂತಿರುವ ಹಚ್ಚ ಹಸುರಿನ ಸೇಂಟ್ ಮೈಕೇಲ್ಸ್ ಮೌಂಟ್, ಲಿಸರ್ಡ್ ಪರ್ಯಾಯ ದ್ವೀಪದ ತುದಿಯಲ್ಲಿ ರಭಸದಿಂದ ಬಂಡೆಗಳ ಮೇಲೆ ಅಪ್ಪಳಿಸುತ್ತಿರುವ ಅಟ್ಲಾಂಟಿಕ್ ಸಾಗರದ ದೈತ್ಯ ಅಲೆಗಳ ರೌದ್ರ ರಮಣೀಯತೆ, ಬ್ರಿಟನ್ನಿನ ತುತ್ತ ತುದಿಯ ಭೂ ಭಾಗ ಲ್ಯಾಂಡ್ಸ್ ಎಂಡ್; ಎಲ್ಲಕ್ಕೂ ಮಿಗಿಲಾಗಿ ವಿವಿಧ ದೇಶಗಳ ವಿವಿಧ ಸಂಸ್ಕೃತಿಗಳ ವಿದ್ಯಾರ್ಥಿ ವಿದ್ಯಾರ್ಥಿನಿಯರು ಪರಸ್ಪರ ಅರಿವನ್ನು ಪಡೆಯಲು ಹೇಳಿ ಮಾಡಿಸಿಟ್ಟಂ ತಹ ಅವಕಾಶ. ಇವುಗಳೆಲ್ಲದರ ಒಟ್ಟು ಪರಿಣಾಮ, ಒಮ್ಮೆಲೇ ಯಾವುದೋ ಒಂದು ಕಿನ್ನರ ಲೋಕಕ್ಕೆ ಪ್ರವೇಶಿಸಿದ ಭಾವನೆ.

ಅಂದು ಬೆಳಗ್ಗೆ ಸಮುದ್ರ ತೀರಕ್ಕೆ ತಿರುಗಾಡಲು ಹೊರಟ ನಮ್ಮ ಗುಂಪಿನಲ್ಲಿ ಐದು ಜನ. ನ್ಯೂಜೀಲೆಂಡಿನ ರೋಜರ್, ಮಲೇಷ್ಯಾದ ನಾ. ಪ., ಪೂರ್ವ ಪಾಕಿ ಸ್ತಾನದ (ಇಂದಿನ ಬಾಂಗ್ಲಾದೇಶ) ಜಾನು ಆಲಿ ಸಿದ್ದೀಕ್, ಆಸ್ಟ್ರೇಲಿಯಾದ ಬೆಟ್ಸಿ ಲೈಟ್‌ಫುಟ್ ಮತ್ತು ನಾನು.

"ಇಂದು ಸಂಜೆ ನಾವೆಲ್ಲಾ ನಮ್ಮ ನಮ್ಮ ದೇಶದ ಯಾವುದಾದರೊಂದು ಸಾಂಸ್ಕೃತಿಕ ಕಾರ್ಯಕ್ರಮ ಕೊಡಬೇಕಂತೆ. ಮಿಸ್ ಸ್ಟೀವನ್ಸ್ ನಿನ್ನೆ ರಾತ್ರೆ ನನಗೆ ಈ ವಿಷಯ ತಿಳಿಸಿ ಎಲ್ಲರಿಗೂ ಹೇಳಿಬಿಡು ಅಂತ ಹೇಳಿದ್ದಾರೆ" ರೋಜರ್ ಒಂದು ಬಾಂಬ್ ಷೆಲ್ ಎಸೆದ.

"ಆಸ್ಟ್ರೇಲಿಯಾದಿಂದ ನಾನು ಮತ್ತು ಬಿಲ್ ಇಬ್ಬರೇ ಇರೋದು. ಇಬ್ಬರಿಗೂ ಸಂಸ್ಕೃತಿ ಅನ್ನೋ ಪದದ ಅರ್ಥ ಸಹಾ ಗೊತ್ತಿಲ್ಲ. ಕಾರ್ಯಕ್ರಮ ಏನು ಕೊಡೋ ಕ್ಕಾಗುತ್ತೆ? ಅಂದ ಹಾಗೆ ನ್ಯೂಜೀಲೆಂಡಿನಿಂದ ನೀನೊಬ್ಬನೇ ಅಲ್ವೇನೋ, ರೋಜರ್? ನೀನೇನ್ಮಾಡೋಣಾ ಅಂತ ಇದ್ದೀಯಾ ಯಾವ್ದಾದರೂ ನರ್ತನ ಬರುತ್ತಾ? ಹ್ಹಿ ಹ್ಹಿ" ಬೆಟ್ಸಿಯ ನಗುವಿನಲ್ಲಿ ಆತ್ಮೀಯತೆ ಇತ್ತು.

"ಹೌದು ಬೆಟ್ಸಿ, ರಾತ್ರೆ ಎಲ್ಲಾ ಅದನ್ನೇ ಯೋಚನೆ ಮಾಡ್ತಾ ಇದ್ದೆ. ನಮ್ಮ ನಾಡಿನ ಆದಿ ನಿವಾಸಿಗಳು ಮಾವೊರಿಗಳು. ಅವರು ಸಮುದ್ರಕ್ಕೆ ದೋಣಿಯಲ್ಲಿ ನಾಗಿ, ಅಲ್ಲಿ ಮೀನು ಹಿಡಿದ ಮೇಲೆ. ಸಂಜೆ ದಡಕ್ಕೆ ಹಿಂತಿರುಗುವಾಗ ಅವರದ್ದೇ ಆದ ಒಂದು ಹಾಡು ಹೇಳ್ತಾರೆ. ಹಾಗೆ ಹಾಡ್ತಾ ಇರೋವಾಗ ಮಿಂಚು ಹುಳುಗಳು ಅವರ ದೋಣಿಯ ಸುತ್ತ ಹಾರಾಡುತ್ತಾ, ದೂರಕ್ಕೆ ಚಿಕ್ಕ, ಚಿಕ್ಕ ಮಿನುಗು ತಾರೆಗ ಳಂತೆ ಕಾಣುತ್ತವೆ. ಅಂಥಾ ಒಂದು ಹಾಡನ್ನ ಇಂದು ಸಂಜೆ ಹಾಡುಕ್ಕೆ ಪ್ರಯತ್ನಿ

ಸ್ಕೀನಿ" ರೋಜರ್ ತನ್ನ ಆಲೋಚನೆಯನ್ನ ಮುಚ್ಚು ಮರೆ ಇಲ್ಲದೇ ಹೇಳಿದ.

ನನಗೆ ಆಗಲೇ ಆತಂಕ ಶುರುವಾಗಿತ್ತು. ಅಲ್ಲಿನ ವಿದ್ಯಾರ್ಥಿ ಗುಂಪಿನಲ್ಲಿ ನಾವು ಮೂವರೇ ಭಾರತೀಯರು. ನಾನು, ಹೈದರಾಬಾದಿನ ರಾವ್ ಮತ್ತು ಖರಗ್‌ಪುರದ ಬೋಸ್. ಇದ್ದದ್ದರಲ್ಲಿ ಬೋಸ್ ಸ್ವಲ್ಪ ಎಕ್ಸ್‌ಟ್ರೋವರ್ಟ್. ರಾವ್ ಅಂತೂ ಅಳು ಮೋರೆ. ಕಳೆದ ಐದು ದಿನವೂ ಊಟ ಸರಿಯಿಲ್ಲ, ಅದು ಸರಿಯಿಲ್ಲ ಅಂತ ಗೊಣಗ್ತಾ ಇದ್ದ. ಅವನು ಮಾತಾಡೋ ಇಂಗ್ಲೀಷ್, ನನ್ನ ಬಿಟ್ಟು ಇನ್ಯಾರಿಗೂ ಅರ್ಥವಾಗ್ತಾ ಇರ್ಲಿಲ್ಲ. ಬೇರೆಯೋರ ಉಚ್ಚಾರಣೆ ಅವನಿಗೆ ಕಬ್ಬಿಣದ ಕಡಲೆ. ಹಾಗಾಗಿ ಈ ಸಂಜೆಗೆ ಅವನಿಂದೇನೂ ಸಹಾಯ ಸಿಗೋ ಹಾಗಿರಲಿಲ್ಲ. ಜಾನು ಮಾತಿನಿಂದ ನನ್ನ ಆಲೋಚನಾ ಸರಣಿಗ ತುಂಡು ಬಿತ್ತು.

"ಶಿವು, ಪೂರ್ವ ಪಾಕಿಸ್ತಾನದಿಂದ ನಾನೊಬ್ಬನೇ. ಭಾರತದಿಂದ ನೀವು ಮೂವರಿದ್ದೀರಿ. ಎಲ್ಲಾ ಸೇರಿ ಇಂಡೋ-ಪಾಕಿಸ್ತಾನ್ ಜಂಟಿ ಕಾರ್ಯಕ್ರಮ ಏಕೆ ಕೊಡಬಾರದು ? ರಾಜಕಾರಣಿಗಳು ಮಾಡಲು ವಿಫಲರಾದದ್ದನ್ನು ನಾವು ಮಾಡಿ ತೋರಿಸಿದ ಹಾಗಾಗುತ್ತೆ.

ನಾನು "ಓಹೋ, ಅದಕ್ಕೇನು. ಹಾಗೇ ಆಗಲಿ. ಬೆಳಗಿನ ಉಪಹಾರ ಮುಗಿದ ತಕ್ಷಣ ಹೋಟೆಲಿನ ಲಾಬಿಯಲ್ಲಿ ಎಲ್ಲಾ ಸೇರೋಣ" ಅಂತ ಅವನ ಯೋಚನೆಯನ್ನ ಅನುಮೋದಿಸಿದೆ.

ನಾವಿದ್ದ ಬೀಚ್‌ಕ್ರಾಫ್ಟ್ ಹೋಟೆಲಿನ ಉಪಾಹಾರದ ಹಜಾರ ಬಹು ವಿಶಾಲ. ಸಮುದ್ರದತ್ತ ಚಾಚಿದಂತಿದ್ದ ಆ ಹಜಾರದ ಮೂರು ಕಡೆಗಳಿಗೂ ದೊಡ್ಡ ಗಾಜಿನ ಕಿಟಕಿಗಳು. ಕಣ್ಣು ತಣಿಯುವಷ್ಟು ನೋಡಬಹುದಾದ ಸಾಗರದ ತಡೆಯಿಲ್ಲದ ದೃಶ್ಯ. ನಮ್ಮ ಟೇಬಲ್ಲಿನಲ್ಲಿ ನಾವು ನಾಲ್ಕು ಜನ. ರಷ್ಯಾದ ಜಮಾಭಿನ್‌ಸ್ಕಿ, ಸ್ವಿಟ್ಜರ್ಲೆಂಡಿನ ರೋಸ್ ಮೇರಿ ಹಾಗೂ ಮಾಲ್ಟಾದ ಕಾರ್‌ಮೆನ್. ಜ....ನ ಇಂಗ್ಲೀಷೋ ದೇವರಿಗೇ ಪ್ರೀತಿ. ಮಿಕ್ಕೋರೂ ಅಷ್ಟಕ್ಕಷ್ಟೆ. ಆ ಟೇಬಲ್ಲಿಗೆ ನಾನೇ ಇಂಗ್ಲಿಷ್ ಪ್ರೊಫೆಸರ್. ಕೆಂಪು ಮತ್ತು ಬಿಳಿ ಚೌಕಳಿ ನಮೂನೆಯ ಫ್ರಾಕ್‌ಗಳನ್ನು ತೊಟ್ಟು, ಶುಭ್ರವಾದ ಬಿಳಿ ಏಪ್ರನ್‌ಗಳನ್ನು ಧರಿಸಿದ್ದ ಇಂಗ್ಲಿಷ್ ಪರಿಚಾರಿಕೆಯರು, ಮದುವೆ ಮನೆಯಲ್ಲಿನಂತೆ ಸಂಭ್ರಮದಿಂದ ಟೇಬಲ್ಲುಗಳ ಮಧ್ಯೆ ಓಡಾಡುತ್ತಾ ನಮ ಗೆಲ್ಲಾ ಪಾರಿಡ್ಜ್. ಸಾಮನ್ ಫಿಷ್ ಇತ್ಯಾದಿಗಳನ್ನೆಲ್ಲಾ ಒಂದೊಂದಾಗಿ ತಂದಿಡು ತ್ತಿದ್ದರು. ಇಂಗ್ಲಿಷ್ ಹುಡುಗಿಯರನ್ನು ನೋಡಿದ ಕೂಡಲೇ ನಮ್ಮ ಜ.... ತನ್ನ ಇಂಗ್ಲಿಷನ್ನು ಪ್ರಯೋಗಿಸಲು ಇದೇ ಸೂಕ್ತ ಸಮಯವೆಂದು ನಿರ್ಧರಿಸಿದ.

ಒಬ್ಬ ಜೆಂದುಳ್ಳಿ ಹೆಣ್ಣು ಅವನ ಮುಂದೆ ಪಾರಿಡ್ಜ್ ಇಡುತ್ತಿದ್ದಾಗ ಜ.... ಅವಳ ಕಡೆ ತಿರುಗಿ "What name?" ಅಂತ ಕೇಳಿದ. ಅವಳು ಮುಗುಳ್ನಕ್ಕು, "Elizabeth, but you may call me Liz" ಅಂದಳು.

ಅಷ್ಟಕ್ಕೇ ಸುಮ್ಮನಾಗದೆ ನಮ್ಮ ಮಿತ್ರ "Liz, did you have a good slap ?" ಅಂದುಬಿಟ್ಟ.

ಆಕೆ ಮುಖ ಕೆಂಪಗೆ ಮಾಡಿಕೊಂಡು "I beg your pardon !" ಅಂತ ಹೇಳುತ್ತಾ ಕೋಪದಿಂದ ಹೊರಟು ಹೋದಳು.

ನಾನು ತಡೆಯಲಾರದೆ "ಯಾಕೆ ಹಾಗೆ ಹೇಳ್ದೆ?" ಅಂತ ಅವನನ್ನು ಕೇಳಿದೆ. ಅವನು ಅಮಾಯಕನಂತೆ "ಸ್ಲೀಪ್‌ನ ಪಾಸ್ಟ್ ಟೆನ್ಸ್ ಸ್ಲಾಪ್ ಅಲ್ವೇನು?" ಅಂತ ನನ್ನೇ ಕೇಳಿದ.

ಇದನ್ನೆಲ್ಲಾ ನೋಡುತ್ತಿದ್ದ ರೋಸ್ ಮೇರಿ "ಈ ಇಂಗ್ಲೀಷರೆಲ್ಲಾ ಸುಳ್ಳು ಗಾರರು" ಅಂತ ಒಂದು ಹೇಳಿಕೆ ಕೊಟ್ಟಳು.

"ಯಾಕೆ ಯಾರಾದ್ರೂ ಮೋಸ ಮಾಡಿದ್ರ ನಿನಗೆ?" ಅಂತ ಸಹಾನುಭೂತಿ ಯಿಂದ ಕೇಳಿದೆ. ಅವಳು "ಮತ್ತಿನ್ನೇನು, Worcester ಅಂತ ಬರೀತಾರೆ. ವೂಸ್ಟರ್ ಅಂತ ಓದ್ತಾರೆ. ಬರೆಯೋದೊಂದು, ಓದೋದೊಂದು. ಮರ್ಯಾದೆ ಯಿಂದ ನಮ್ಮ ಜರ್ಮನ್ ಭಾಷೆ ತರಹಾನೋ ಅಥವಾ ನಿಮ್ಮ ಸಂಸ್ಕೃತದ ತರ ಹಾನೋ ಇದ್ದಿದ್ರೆ. ನಮಗೆಲ್ಲಾ ಎಷ್ಟು ಸರಾಗ ಆಗ್ತಿತ್ತು" ಅಂತ ನಗುತ್ತಾ ಹೇಳಿದಳು.

"ಆಗ ಇಂಗ್ಲಿಷ್ ಕಲಿಯೋದಕ್ಕೆ ನೀನು ಇಂಗ್ಲೆಂಡ್‌ವರೆಗೂ ಬರ್‍ತಾ ಇರ್‍ಲಿಲ್ಲ. ನಮಗೆಲ್ಲಾ ನಿನ್ನ ಸುಂದರ ಸ್ವಿಸ್ ವದನಾನ ನೋಡೋ ಅವಕಾಶ ತಪ್ಪಿ ಹೋಗ್ತಾ ಇತ್ತು" ಅಂತ ಅವಳನ್ನು ಚುಡಾಯಿಸಿದೆ. ಉಪಾಹಾರ ಮುಗಿದಿತ್ತು.

ಉಪಾಹಾರಾನಂತರ, ನಾನು, ಬೋಸ್, ಜಾನು, ಮೂವರೂ ಸೇರಿ ಮಂತ್ರಾಲೋಚನೆ ನಡೆಸಿದೆವು. 'ಭಾರತದಲ್ಲಿ ವಧು ಪರೀಕ್ಷೆ' ಅಂತ Skit ಒಂದನ್ನು ಹೊರತರಲು ನಿರ್ಧರಿಸಿದ್ದಾಯಿತು. ಅದಕ್ಕೆ ಪಾತ್ರಧಾರಿಗಳು ಬೇಕಲ್ಲಾ ? ನಾನು ವಧುವಿನ ತಂದೆಯ ಪಾತ್ರಕ್ಕೆ ಒಪ್ಪಿದೆ. ಬೋಸ್ ವರನ ತಂದೆಯ ಪಾತ್ರ ಮಾಡು ವುದೆಂದಾಯಿತು. ಜಾನು ಪುರೋಹಿತನ ಪಾತ್ರ. ಇನ್ನು ಉಳಿದ ಪಾತ್ರಗಳೆಂದರೆ ವರ, ವಧು ಮತ್ತು ಸೂತ್ರಧಾರ. ಈ ಸೂತ್ರಧಾರನ ಅಗತ್ಯತೆ ಬಗ್ಗೆ ಒಂದು

ಮಾತು. Skit ಅನ್ನು ನಾವೆಲ್ಲಾ ನಮ್ಮ ನಮ್ಮ ಭಾಷೆಗಳಲ್ಲೇ ಮಾತನಾಡುವುದೆಂದು ತೀರ್ಮಾನಿಸಿದ್ದರಿಂದ ಅದನ್ನೆಲ್ಲಾ ಸ್ಥೂಲವಾಗಿ ಇಂಗ್ಲೀಷಿಗೆ ತರ್ಜುಮೆ ಮಾಡಿ ಹೇಳಲು ಈ ಪಾತ್ರ ಅಗತ್ಯವಾಗಿತ್ತು.

ಜಾನು ಸ್ವಲ್ಪ ಯೋಚಿಸಿ, ವಧುವಿನ ಪಾತ್ರಕ್ಕೆ ಜಾಂಬಿಯಾದಿಂದ ಬಂದಿದ್ದ ಗುಜರಾತಿ ವಿದ್ಯಾರ್ಥಿನಿಯೊಬ್ಬಳನ್ನು ಒಪ್ಪಿಸುವುದಾಗಿ ಆಶ್ವಾಸನೆ ಕೊಟ್ಟ. ನಾನು ವರನ ಬೇಟೆಗೆ ಹೊರಟೆ. Skitನಲ್ಲಿ ನೈಜತೆ ಇರಬೇಕಾದರೆ ಈ ಪಾತ್ರಕ್ಕೆ ಕಾಕೇಷಿಯನ್ ಹುಡುಗರನ್ನು ಆರಿಸುವಂತಿರಲಿಲ್ಲ. ಕೊನೆಗೆ ಮಾಹಿರ್ ಸಿಕ್ಕಿದ. ಮಾಹಿರ್ ಇರಾಕಿನಿಂದ ಬಂದ ವಿದ್ಯಾರ್ಥಿ. ಲಂಡನ್ನಿನಲ್ಲಿ ನ್ಯೂಕ್ಲಿಯರ್ ಫಿಸಿಕ್ಸ್ ಓದುತ್ತಿದ್ದ.

"ಮಾಹಿರ್ ನಿನಗೆ ಮದುವೆಯಾಗಿದೆಯೇ ? "

"ಇಲ್ಲ ಮಹರಾಯ, ಹಾಗೇ ಸುಖವಾಗಿದ್ದೀನಿ. ಯಾಕೆ ಕೇಳ್ತೀ ? "

"ಈ ಸಂಜೆ ನೀನು ವಧು ಪರೀಕ್ಷೆಗೆ ಒಪ್ಪಿಕೊಳ್ಳಬೇಕು. ಒಳ್ಳೇ ಗುಜರಾತಿ ಹುಡುಗಿ ತೋರಿಸ್ತೀವಿ."

ಮಾಹಿರ್ ಬಲು ಚೂಟಿ. ಬೇಗ ಸಂಗತಿ ಗ್ರಹಿಸಿದ.

"ನನಗೆ ನಿಮ್ಮ ಭಾಷೆ ಬರುವುದಿಲ್ಲವಲ್ಲಾ."

"ಏನೂ ಯೋಚನೆ ಮಾಡಬೇಡ. ನೀನು ಅರಾಬಿಕ್‌ನಲ್ಲೇ ಮಾತನಾಡು. ತರ್ಜುಮೆ ಮಾಡುಕ್ಕೆ ಸೂತ್ರಧಾರ ಇರ್ತಾನೆ."

ವರನ ಸಮಸ್ಯೆ ತೀರಿತು. ಇನ್ನು ಸೂತ್ರಧಾರ. ಯೋಚಿಸ್ತಾ ಕೂತಿದ್ದಾಗ ಬೆಟ್ಸಿ ಬಂದು ನನ್ನನ್ನು ಕುರಿತು,

"ಒಂದು ಅರ್ಜೆಂಟ್ ವಿಷಯ. ನಿನ್ನ ರೂಮ್ ಮೇಟ್ ರಾವ್‌ನ ನಮ್ಮ ಕಾರ್ಯಕ್ರಮಕ್ಕೆ ಎರವಲು ಕೊಡಬೇಕು. ಹೇಗಾದ್ರೂ ಮಾಡಿ ಅವನನ್ನ ಒಪ್ಪಿಸೋ ಭಾರ ನಿನ್ನದು" ಅಂತ ಕೇಳಿಕೊಂಡಳು.

ನನಗೆ ಒಂದು ಐಡಿಯ ಹೊಳೆಯಿತು.

"ಆಗಲಿ ಬೆಟ್ಸಿ, ಆದರೆ ಒಂದು ಕಂಡೀಷನ್. ನೀನು ನಮ್ಮ Skitಗೆ ಸೂತ್ರ ಧಾರಿಣಿ ಆಗಬೇಕು" ಅಂತ ಕೇಳಿದೆ. ಅವಳು ಒಪ್ಪಿದಳು.

ಅಂದು ಸಂಜೆಯ ಮೊದಲ ಕಾರ್ಯಕ್ರಮ ರೋಜರನ ಮಾಪೋರಿಪಾಯ್ ಗೀತೆ. ರೋಜರ್ ವೇದಿಕೆಯ ಮೇಲೆ ಬಂದು ನಿಂತ. ಕೈಯಲ್ಲಿ ಒಂದು ಉದ್ದವಾದ ಇನ್‌ಸುಲೇಟೆಡ್ ತಂತಿ. ಆ ತಂತಿಯ ಮೇಲೆ ಅಲ್ಲಲ್ಲೇ ಬಲ್ಬುಗಳು. ನವರಾತ್ರಿಯಲ್ಲಿ ಅಥವಾ ಮದುವೆ ಮನೆಗಳಲ್ಲಿ ಸೀರಿಯಲ್ ಲೈಟ್ ಉಪಯೋಗಿಸುತ್ತಾರಲ್ಲಾ, ಆ ರೀತಿ. ರೋಜರ್ ಆ ತಂತಿಯ ಒಂದು ತುದಿಯನ್ನು ಹಿಡಿದು ಕವಣೆ ತಿರುಗಿಸುವ ಹಾಗೆ ತಿರುಗಿಸಲು ಪ್ರಾರಂಭಿಸಿದ. ಆಗ ನನಗೆ ಅರ್ಥವಾಯಿತು. ಈ ಮಾಪೋರಿ ಪಾಯ್ ಗೀತೆಗೆ ಮಿಂಚು ಹುಳುಗಳು ಬೇಡವೇ? ಮಿಣುಕುತ್ತಿರುವ ಬಲ್ಬ್‌ಗಳು ಆ ಕಲ್ಪನೆಯನ್ನು ಹುಟ್ಟಿಸಲೆಂದು ರೋಜರ್ ಆಶಿಸಿದ್ದ. ಆದರೆ ರೋಜರ್ ಎಣಿಸಿದ್ದೇ ಒಂದು. ವಿಧಿ ನಿರ್ಧರಿಸಿದ್ದೇ ಒಂದು. ಆ ತಂತಿಯ ಕವಣೆಯ ತುದಿ, ಮೇಲಿದ್ದ ತೂಗುದೀಪದ ಒಂದು ರೆಂಬೆಗೆ ಭದ್ರವಾಗಿ ಸಿಕ್ಕಿಕೊಂಡಿತು. ಶುರು ಮಾಡಿದ್ದ ಗೀತೆಯನ್ನು ಅಲ್ಲಿಗೇ ನಿಲ್ಲಿಸಿ, ರೋಜರ್ ತಂತಿಯನ್ನು ಜಗ್ಗಿದ. ತೂಗು ದೀಪ ಅಲ್ಲಾಡಿತೇ ವಿನಹ ತಂತಿ ಕೆಳಗೆ ಬರಲಿಲ್ಲ. ರೋಜರ್ ತಂತಿಯ ಕೈ ಬಿಟ್ಟು, ಕೈ ಕಟ್ಟಿ ನಿಂತು ಹರದಿಂದ ತನ್ನ ಗೀತೆಯನ್ನು ಹಾಡಿ ಮುಗಿಸಿದ.

ರೋಸ್ ಮೇರಿ ಮತ್ತು ಅವಳ ಜರ್ಮನ್ ಸಂಗಡಿಗರು, ಅಣಕು ನಾಟಕವೊಂದನ್ನು ಆಡಿದರು. ಹಿಂದಿನ ಸಂಜೆ ನಾವೆಲ್ಲಾ ನೋಡಿದ್ದ, ಕೆನಡಾದ ಕುದುರೆ ರಾವುತರ ಬಗ್ಗೆ ರಚಿಸಿದ್ದ ಗೀತ ನಾಟಕವೊಂದನ್ನು ಆಧರಿಸಿ, ಅದನ್ನು ಗೇಲಿ ಮಾಡುವ ಪ್ರಯತ್ನ ಅದು. ನಿಸ್ಸಂಶಯವಾಗಿ, ಅಂದಿನ 10-14 ಕಾರ್ಯಕ್ರಮಗಳಲ್ಲಿ ಈ ಅಣಕು ನಾಟಕ ಅತ್ಯುತ್ತಮ ಪ್ರದರ್ಶನವಾಗಿತ್ತು.

ನಮ್ಮ ಸರದಿ ಬಂತು. ನಾನು ಮತ್ತು ನನ್ನ ನಾಟಕದ ಪತ್ನಿ ಪಾಕಿಸ್ತಾನದ ಜಹರುನ್ನಿಸಾ (ಇದೊಂದು ಕೊನೇ ನಿಮಿಷದ ಆಯ್ಕೆ) ಇಬ್ಬರೂ ನಮ್ಮ ಮಗಳು ಜಾಂಬಿಯಾದ ಶೀಲಾ ಬೆನ್‌ಳನ್ನು ಸಾಲಂಕೃತವಾಗಿ ಸಿದ್ಧಗೊಳಿಸಿ, ವಧು ಪರೀಕ್ಷೆಗೆ ಸನ್ನದ್ಧರಾಗಿದ್ದೆವು. ವರನ ತಂದೆ ಬೋಸ್, ತನ್ನ ಮಗ ಇರಾಕಿನ ಮಹೀರ್‌ನನ್ನು ಕರೆದುಕೊಂಡು ನಮ್ಮ ಮನೆಗೆ ಬಂದಿಳಿದ. ಬೋಸ್ ವಿಧುರ. (ಬೇರೆ ಮಾರ್ಗವೇ ಇರಲಿಲ್ಲ. ಪತ್ನಿಯ ಪಾತ್ರಕ್ಕೆ ಯಾರಾದರೂ ಸಿಕ್ಕಬೇಕಲ್ಲ.) ಬೋಸ್ ವಧುವನ್ನು ಆಶೀರ್ವದಿಸುವ ನೆವದಲ್ಲಿ ಆಕೆಯ ಎತ್ತರವನ್ನು ಅಳೆದದ್ದು, ಮಹೀರನ ನಾಚಿಕೆಗಣ್ಣಿನ ವಾರೆ ನೋಟ. ಜಹೀರುನ್ನೀಸಾ ತನ್ನ ಅಳಿಯನನ್ನು ಹೆಮ್ಮೆಯಿಂದ ನೋಡಿ ನೆಟ್ಟಿಗೆ ಮುರಿದ ರೀತಿ, ಎಲ್ಲವನ್ನೂ ಬೆಟ್ಸಿ ನಿರರ್ಗಳವಾಗಿ ವಿವರಿಸಿ, ಇಂಗ್ಲಿಷಿನಲ್ಲಿ ರನ್ನಿಂಗ್ ಕಾಮೆಂಟರಿ ನಡೆಸಿದ್ದಳು.

ಮೊದಲೇ ಹೇಳಿದಂತೆ ಇದೆಲ್ಲಾ ನಡೆದು 20 ವರ್ಷಗಳ ಮೇಲಾಯಿತು. ಮಾಹಿರ್, ಈಗ ಬಾಗ್ದಾದಿನ ಯಾವ ಬಂಕರಿನಲ್ಲಿ ಅಪಾಯ ಇದಿರಿಸುತ್ತಿದ್ದಾನೋ, ಬೆಟ್ಸಿಯ ಬಂಧುಗಳು, ಮಿತ್ರ (?) ಪಡೆಗಳ ಯಾವ ವಿಮಾನದಲ್ಲಿ ಕುಳಿತು ಅದೇ ಬಂಕರಿನ ಮೇಲೆ ದಾಳಿ ನಡೆಸಿದ್ದಾರೋ, ಭಗವಂತನೇ ಬಲ್ಲ. ಆದರೂ ಯುದ್ಧರಂಗದಿಂದ ದೂರದಲ್ಲಿ ಇಲ್ಲಿ ಬೆಂಗಳೂರಿನಲ್ಲಿ ಕುಳಿತು, ಹಳೆಯ ನೆನಪನ್ನು ಮೆಲುಕಾಡಿದಾಗ, ನ್ಯೂ ಕೀಯಲ್ಲಿ ನಮ್ಮನ್ನೆಲ್ಲಾ ಒಂದುಗೂಡಿಸಿ, ನಮ್ಮೆಲ್ಲರ ಮಧುರ ಭಾವನೆಗಳನ್ನು ಹೊರಗೆಡಹುವುದರಲ್ಲಿ ಯಶಸ್ವಿಯಾದ ಮಿಸ್ ಸ್ಟೀವನ್ಸ್ ನೆನಪಿಗೆ ಬರುತ್ತಾರೆ. ಕರಾಳ ನೈಜತೆಯಿಂದ ತುಂಬಿದ ನಮ್ಮ ಈ ಪ್ರಪಂಚಕ್ಕೂ ಒಬ್ಬ ಮಿಸ್ ಸ್ಟೀವನ್ಸ್ ಸಿಗಬಾರದೇ ?



# ಸಧ್ಯ ಬದುಕಿದೆ!

**ಶಾಂತಾ ರಘು**

---

ಬೆಳಗ್ಗೆ ಅಷ್ಟು ಹೊತ್ತಿಗೇ Fire alarm ತರಹ ಬೆಲ್ ಆಯಿತು. ಧಡಬಡಿಸಿ ಓಡಿ ಬಾಗಿಲು ತೆಗೆದರೆ, ನಮ್ಮನೆ ಕೆಲಸ ಮಾಡೋ ರಂಗಮ್ಮನ ಮಗಳು. "ಅವ್ವಾರೇ! ನಮ್ಮಮ್ಮ ಬರಾಕಿಲ್ಲಾ. ಜ್ವರಾ ಬಂದೈತಂತೆ. ವಾಸಿ ಆಗೋದು ಒಂದ್ವಾರ ಆಯ್ತದಂತೆ" ಅಂತ ವಾರ ಒಪ್ಪಿಸಿ ಹೊರಟೇ ಹೋದಳು.

ಅಯ್ಯೋ! ರಂಗಮ್ಮ ಬರೊಲ್ವೆ? ಭಗವಂತಾ! ಹಿಂದಿನ ದಿನ ರಾತ್ರಿ ಎಂಟು ಜನ ಡಿನ್ನರ್‌ಗೆ ಬಂದಿದ್ದು ತಟ್ಟೆ ಲೋಟ ಒಂದ್ರಾಶಿ ಬಿದ್ದಿದ್ವು. ಇವತ್ತೂಂತ ನೋಡಿ ಬೆಡ್‌ಷೀಟುಗಳೂ, ದಿಂಬಿನ ಕವರ್‌ಗಳೂ ನೆನೆಸಿದ್ದಾಗಿದೆ. ಏನ್ಗತಿ?

ಆಚೆ ಈಚೆ ನೋಡಿದಾಗ ಎಲ್ಲಾ ಮನೆಗಳ ಮುಂದೂ ಆಯಾ ಗೃಹಿಣಿಯರು ಚಿಂತಾಕ್ರಾಂತರಾಗಿ ಪ್ರತ್ಯಕ್ಷರಾಗಿದ್ದು ಕಂಡಿತು. ಯಾರ ಮನೇಲೂ ಕೆಲಸದವರು ಬರಲೇ ಇಲ್ವೆ? ಮಿಂಚಿನಂತೆ ಹೊಳೆಯಿತು. ಓಹೊ! ಪಕ್ಕದ ಹಳ್ಳೀಲಿ ಒಂದ್ವಾರ ಜಾತ್ರೆ. ಈಗ ಗೊತ್ತಾಯಿತಲ್ಲ ಜ್ವರದ ಗುಟ್ಟು! ರೇಗಿ ಹೋಯಿತು. ಏನೂಂತ ಅಂದ್ಕೊಂಡಿದಾಳೆ ಈ ರಂಗಮ್ಮ? ತನ್ನ ಕೋಳಿ ಇಲ್ಲದಿದ್ರೆ ಬೆಳಗಾಗೊಲ್ಲ ಅಂದ್ಕೊಂಡಿದಾಳೊ? ಹೇಳೋರು ಕೇಳೋರು ಯಾರೂ ಇಲ್ವೆ? ಮೊದಲು ಕೆಲಸದಿಂದ ಬಿಡಿಸಿ ಬೇರೆಯವಳನ್ನು ನೋಡಬೇಕು ಅಂತ ನಿರ್ಧಾರ ಮಾಡಿಕೊಂಡು ಒಳಗೆ ಬಂದೆ.

ಮುಂದಿನ ವಾರ ರಂಗಮ್ಮನನ್ನು ಬಿಡಿಸಿದ್ದಾಯಿತು ಸುಮಾರು ವರ್ಷ ಒಗ್ಗಿದ್ದ ಅವಳು ಹೋದ ಮೇಲೆ ಪಡಬಾರದ ಪಾಡು ಪಟ್ಟಿದ್ದಾಯಿತು. ಒಳಗಿನ ಕೆಲಸ, ಹೊರಗಿನ ಕೆಲಸಗಳಿಂದ ಹಣ್ಣಾದೆ. ಸಧ್ಯ ಯಾರಾದರೂ ಬಂದ್ರೆ ಸಾಕಪ್ಪಾ ಅಂತ ತಿಳಿದವರಿಗೆಲ್ಲಾ SOS ಕಳಿಸಿದೆ. ನಾಲ್ಕು ದಿನಗಳಲ್ಲಿ ಬಸವನಗುಡಿಯಿಂದ ಗೆಳತಿ ರಮಾ ಫೋನು ಮಾಡಿದಳು.

"ಸುಮಾರು ಕಷ್ಟಪಟ್ಟು ಹುಡುಕಿ ಒಬ್ಬಳನ್ನು ಕಳಿಸಿದ್ದೀನಿ. Adjust ಆಗತ್ತೋ ನೋಡು" ಅಂತ ಒಂಥರಾ ಗೂಢವಾಗಿ ಹೇಳಿದಳು.

ಚಾತಕ ಪಕ್ಷಿಯಂತೆ ಕಾಯ್ತಾ ಇದ್ದೆ ಮಧ್ಯಾಹ್ನ ಮೂರು ಗಂಟೆಗೆ ಕರೆ ಗಂಟೆ ಸದ್ದು. ಬಾಗಿಲಲ್ಲಿ ಪಿಂಕು ಸೀರೆ ಉಟ್ಟು, ಕೊಂಕು ನೋಟ ಬೀರುತ್ತ, ಬಿಂಕದಿಂದ ನಿಂತಿದ್ದವಳೇ ವೆಂಕಿ. ಸ್ಟೈಲಾಗಿ ಕೈಯಲ್ಲಿದ್ದ ಚೀಟಿ ರೆಫರ್ ಮಾಡಿ "ನೀವೇನಾ ಶಾಂತಮ್ಮೋರು ?" ಅಂದ್ಲು.

"ಹೂಂ ಕಣಮ್ಮ. ರಮಾ ಅಮ್ಮ ಕಳಿಸಿದ್ರಾ ? ಒಳಗ್ಬಾ" ಅಂತ ಕರೆದೆ. ಒಳಗೆ ಬಂದು ಬೆತ್ತದ ಕುರ್ಚಿಲಿ ಕುಳಿತಳು. ಬೆಪ್ಪಾಗಿ ನೋಡಿದೆ. ಎಡಗೈಲಿದ್ದ **H.M.T.** ವಾಚು ನೋಡಿದ್ಲು.

"ಬೇಗ ಹೇಳಿಪ್ಪಾ. ನಾನಿನ್ನೂ ಸುಮಾರು ಮನೆಗಳಿಗೆ Interviewಗೆ ಹೋಗ್ಬೇಕೂ" ಅಂದ್ಲು.

"Interviewನೆ ?" ಅಂತ ಬಾಯ್ಬಿಟ್ಟೆ.

"ಹೂಂ ಮತ್ತೆ. ಮನೆಯೋರ್ನ ಇಂಟರ್‌ವ್ಯೂ ಮಾಡಿ ನಂಗೆ ಸರಿ ಹೋದ್ರೆ ಮಾತ್ರ ಒಪ್ಕೋತೀನಿ. ನೋಡೀಮ್ಮ ಮೊದಲೇ ಕರಾರುವಾಕ್ಕಾಗಿ ಹೇಳಿಬಿಡ್ತೀನಿ. ತಿಂಗಳಿಗೆ 250 ರೂ. ಸಂಬಳ ಕೊಡ್ಬೇಕು" ಅಂತ ಶುರು ಮಾಡಿದಳು.

ನನ್ನ ಬಿಟ್ಟ ಬಾಯಿ ಜತೆಗೆ ತೆರೆದ ಕಣ್ಣೂ ಸೇರಿತು. ಕುರ್ಚಿಯಲ್ಲಿ ಕುಸಿದೆ.

"ಒತ್ತಾರೆ ಡೂಟಿ ಟೇಮು ಏಳರಿಂದ ಎಂಟೂವರೆ. ಚಂಜೆ ಮುಂದೆ ಮೂರರಿಂದ ಮೂರೂವರೆ. ನಾನು ಬರೋದ್ರಲ್ಲಿ ಪಾತ್ರೆಗಳನ್ನ ರೆಡಿಯಾಗಿ ಸಿಂಕಿನಲ್ಲಿ ನೆನೆಸಿರ್ಬೇಕು. ಬಟ್ಟೆ ಬಿಸಿ ನೀರ್ನಾಗೆ ನೆನೆಸ್ಬುಡಿ. ಬೆಡ್ ಷೀಟು ಅಂದ್ರೆ ಬಟ್ಟೆ ಮೆಸೀನ್‌ಗೇ ಆಕ್ಬೇಕು. ನಂಗೆ ಪುರಸೊತ್ತಿಲ್ಲ. 8-30 ರಿಂದ ಹತ್ತರವರೆಗೆ ಬೇರೆ ಮನೆ ಡ್ಯೂಟಿ ನಂಗೆ" ಅಂತ ಮಹರಾಯ್ತಿ ಹೇಳ್ತಾನೇ ಇದ್ಲು.

ನಂಗೂ ಸುಸ್ತಾಗಿತ್ತು. "ಸರಿಯಮ್ಮ" ಅಂದೆ.

"ಅಂದ್ಹಾಗೆ ಅಮ್ಮೋರೇ ! ನಿಮ್ಮನೇಲಿ ಟೀನೋ, ಕಾಫೀನೋ ? ಕಾಫಿ ಆದ್ರೆ ಫಿಲ್ಟರ್ ಕಾಫೀನೋ, ಸೋಸಿದ್ದೋ ?" ಅಂತ ಕೇಳಿದ್ಲು.

"ಯಾಕಮ್ಮ ? ಫಿಲ್ಟರ್ ಕಾಫೀನೇ" ಅಂದೆ.

"ಸಧ್ಯ ! ನಂಗೆ ಟೀ, ಸೋಸಿದ ಕಾಫಿ ಯಾವುದೂ ಮೈಗಾಗೊಲ್ಲ. ಆಮೇಲೆ ಅಡಿಗೇಗೆ ಗ್ಯಾಸೋ, ಸೀಮೆ ಎಣ್ಣೆ ಒಲೇನೋ ?" ಕ್ರಾಸ್ ಕೊಶ್ಚನ್ ಮುಂದುವರೆಯಿತು. "ಯಾಕೇಂದ್ರೇ ಸೀಮೆ ಎಣ್ಣೆ, ಇಜ್ಜಲು, ಸೌದೆ ಒಲೆ, ಮಸಿ ಪಾತ್ರೆಗಳಾದ್ರೆ ಇನ್ನೂ 100 ರೂಪಾಯಿ ಜಾಸ್ತಿ ಕೊಡ್ಬೇಕು. ಬೆಳಗ್ಗೆ ಬಿಸಿ ಟಿಫನ್ ಕೊಡ್ಬೇಕು. ನೀವು ಐಸ್ ಪೆಟ್ಟಿಗೇಲಿ ಇಟ್ಟ ಹಳೇದೆಲ್ಲಾ ನಾವು ತಿನ್ನೊಲ್ಲ. ವರ್ಷಕ್ಕೆ ಒಂದು ಹೊಸ ಸೀರೆ, ಒಂದು ಹಳೇ ಸೀರೆ ಕೊಡ್ಬೇಕೂ" ವೆಂಕಿಯು ಕಂಡಿಷನ್ನು ಹನುಮಂತನ ಬಾಲದ ತರಹಾ ಬೆಳೀತಾನೇ ಇದ್ವು ! ಕಡೆಗೂ ನಮ್ಮ ಹಿರಿಯರು ಮಾಡಿದ್ದ ಪುಣ್ಯದಿಂದ ನಮ್ಮನೆ ಅವಳಿಗೆ ಒಪ್ಪಿಗೆಯಾಯಿತು.

ಡ್ಯೂಟಿಗೆ ಜಾಯಿನ್ ಆದ್ಲು ತಾಕೋ ಠೀಕು. ಶಿಸ್ತೋ ಶಿಸ್ತು. ಭಾರೀ ಸಿಸ್ಟಮ್ಮು. 8-30ಕ್ಕೆ ಯಾವ ಕೆಲಸ ಮಾಡ್ತಾ ಇದ್ರೂ, ಧಢಾಲನೆ ಹಾಗೇ ಬಿಟ್ಟು ಓಡಿ ಬಿಡ್ತಿದ್ದಳು.

ಆರನೇ ದಿನವೇ "ಅವ್ವಾರೇ, ನಾಳೆ ಬರೊಲ್ಲ. ಮೀಟಿಂಗು ಇದೆ" ಅಂದ್ಲು.

"ಆದ್ಯಾವುದೇ ಅದು ಮೀಟಿಂಗು ?" ಅಂತ ವಿಸ್ಮಿತಳಾದೆ.

"ಹೂಂ, ನಮ್ಮ ಯೂನಿಯನ್ ಮೀಟಿಂಗು. ತಿಂಗಳು ತಿಂಗಳು ದೇವಸ್ಥಾನದ ಮುಂದಿರೋ ಅಶ್ವತ್ಥ ಕಟ್ಟೆ ಮೇಲೆ ಬೆಳಗ್ಗೆ 11 ಗಂಟೆಗೆ ಮೀಟಿಂಗು ಮಾಡ್ತೀವಿ. ಬತ್ತೀನಿ ಕಣವ್ವ" ಅಂತ ಹೊರಟೇ ಹೋದಳು.

ನನಗೆ ಇದ್ದದ್ದೂ ರೇಗಿ ಹೋಯಿತು. ಎಲ ಎಲಾ ! ಇದೇನಿದು ? ಎಲ್ಲಾ ಮಿತಿ ಮೀರಿ ಹೋಗ್ತಾ ಇದೆಯಲ್ಲ ! ಯೂನಿಯನ್ ಅಂತೆ ! ಮೀಟಿಂಗಂತೆ ! ತಕ್ಷಣ ನಿರ್ಧಾರ ಮಾಡಿದೆ.

ಮಾರನೆಯ ದಿನ ಬೆಳಗ್ಗೆ ಹನ್ನೊಂದಕ್ಕೆ, ಹಾಗೇ ಹೋಗಿ ಅಶ್ವತ್ಥ ಕಟ್ಟೆಯ ಹತ್ತಿರ ಮರೆಯಾಗಿ ನಿಂತು ನೋಡಿದೆ. ನಮ್ಮ ಏರಿಯಾದ ಕೆಲಸದ ಮಹಿಳೆಯರೆಲ್ಲಾ ಜಮಾಯಿಸಿದ್ದರು. ಶಿಸ್ತಾಗಿ ಕೂತಿದ್ರು. ನಮ್ಮನೆ ಮಾಜಿ ಕೆಲಸದಾಕೆ ರಂಗಮ್ಮನೂ ಇದ್ದಳು. ಕಟ್ಟೆಯ ಮೇಲೆ ಸೆರಗು ಬಿಗಿದುಕೊಂಡು ವೀರಾವೇಶದಿಂದ ಒಬ್ಬಾಕೆ ಭಾಷಣ ಬಿಗೀತಾ ಇದ್ಲು.

"ಮನೆ ಕೆಲಸ ಮಾಡೋದೂಂದ್ರೆ ಏನು ಕಳಪೆಯಾಗಿ ಹೋದ್ವೆ ? ಒಂದಿನ ನಾವು ಬರದೇ ಹೋದ್ರೆ ಈ ಯಜಮಾನಮ್ಮನವರೆಲ್ಲಾ ಕಂಗಾಲಾಗಿ ಒದ್ದಾಡೋದು ಗೊತ್ತಿಲ್ವೆ ? ಆದ್ರೂ ನಮ್ಮನ್ನ ಹೀನಾಯವಾಗಿ ಕಾಣಬಹುದೆ ? ನಾವು

ಸುಮ್ನೆ ಯೂನಿಯನ್ ಮಾಡಿ ಪ್ರಯೋಜನ ಇಲ್ಲ. ನಮ್ಮ ಹಕ್ಕುಗಳಿಗಾಗಿ ಹೊಡೆದಾಡಬೇಕು. ನಾವು ಎಲ್ರ ತರಾ ದುಡಿಯೋಲ್ವೆ ? ಎಲ್ಲಾ ತರ ಅನು ಕೂಲಗಳು ನಮಗೂ ಬೇಕು... ..." ಎಂದು ಘರ್ಜಿಸಿದಳು.

ಅಷ್ಟರಲ್ಲಿ ಇನ್ನೊಬ್ಬಳು ಕೋಪಾವೇಶದಿಂದ ವೇದಿಕೆಯ ಮೇಲೆ ಜಿಗಿದಳು. "ಅಷ್ಟೇ ಅಲ್ಲಾ ! ಗೋರ್ಮೆಂಟು ಕೆಲ್ಸ ಮಾಡೋರು, ಫಾಕ್ಟರಿ ಕೆಲಸದೋರು ಎಲ್ಲಾ ವಾರ ಇಡೀ ಕೆಲಸ ಮಾಡ್ತಾರ್ಯೆ ? ಎಷ್ಟು ಅನುಕೂಲಗಳು ಅವರ್ಗೆ ! ವಾರಕೊಂದು ದಿನ ರಜ, C.L., S.L., E.L., ಮೆಡಿಕಲ್ ಲೀವು, L.T.C., ಒಂದೇ, ಎರಡೆ ? ನಮಗೆ ಏನಿದೆ ? ದಿನಾ ಇಡೀ ಗೇಯೋದು. ಮುಸುರೆ ತಿಕ್ಕೋದು, ಮೂರ್ಕಾಸು ಸಂಬಳಕ್ಕೆ ಮೂರಾಬಟ್ಟೆ ಅನಿಸ್ಕೊಳ್ಳೋದು. ಇನ್ಮೇ ಲಾದ್ರೂ ನಾವೆಲ್ಲಾ ಕಣ್ಣು ಬಿಡಬೇಕು. ಗೋರ್ಮೆಂಟು ಕೆಲಸ ಎಲ್ಲಾ ಅನುಕೂಲಾನೂ ನಮಗೂ ಗ್ಯಾರಂಟಿ ಮಾಟ್ಕೊಂಡೇ ಇನ್ಮೇಲೆ ಮನೆ ಕೆಲಸ ಒಪ್ಕೊಬೇಕು. ಇಲ್ದೇ ಹೋದ್ರೇ....." ಎಂದು ಸಭೆಯನ್ನು ಉಗ್ರವಾಗಿ ನೋಡಿದಳು. ತಕ್ಷಣ ಎಲ್ಲರೂ "Strike ! Strike !" ಅಂತ ಕಿವಿ ಗಡಚಿಕ್ಕುವ ಹಾಗೆ ಕಿರುಚಿದರು.

ಆಚೆ ಮನೇಲಿ ಕೆಲಸ ಮಾಡೋ ಚಿಕ್ಕಿ ಮುಂದೆ ಬಂದು "ಈಯಮ್ಮೋ ರೆಲ್ಲಾ ಕೆಲ್ಸಕ್ಕೆ ಮಡಗಿಕೊಳ್ಳುವಾಗ್ಲೇ ಒಂದು ಮಾತಾಡ್ತಾರೆ. ಎರಡು ಪಾತ್ರೆ ತೊಳೆದು, ಗುಡಿಸಿ, ಬಟ್ಟೆ ಒಗ್ಯೋದು, ಅಷ್ಟೇ ಅಂತಾರೆ. ನಾಕು ದಿನಾ ಆಗಾ ಕಿಲ್ಲ 'ಸ್ವಲ್ಪ ಮಗೂನ ಸ್ಕೂಲಿಗೆ ಬಿಟ್ಬಾ, ಓಡ್ಹೋಗಿ 50 ಪೈಸೇಗೆ ಹಸಿ ಮೆಣಸಿನಕಾಯಿ ತಗಂಬಾ, ಸ್ವಲ್ಪ ಅಕ್ಕಿ ಕೇರ್ಕೊಡು', ಅಂತ ಶುರು ಮಾಡ್ತಾರೆ. ಇನ್ಮೇಲೆ ನಮ್ಗೂ Overtime ಮಾಡಿದ್ರೆ ಜಾಸ್ತಿ ದುಡ್ಡು ಕೊಡ್ಬೇಕು" ಅಂತ ಆಕ್ರೋಶದಿಂದ ಕೂಗಿದಾಗ ಚಪ್ಪಾಳೆಗಳ ಸುರಿಮಳೆಯಾಯಿತು.

ಈಗ ನಮ್ಮ ರಂಗಮ್ಮ ವೇದಿಕೆಯೇರಿ, "ಡಾಕ್ಟರ ಮನೆ ಶಾಂತಮ್ಮೋರು ಮುಂಚೇನೇ ನೋಟೀಸ್ ಕೊಡ್ದೆ ನನ್ನ ಕೆಲಸದಿಂದ ಬಿಡಿಸಿದಾರೆ. ಈಗ ಗೋರ್ಮೆಂಟ್ ರೂಲ್ಸ್ ಬಂದೈತಂತೆ—ಹಿಂದೆ ಮುಂದೆ ಏಳ್ದೆ ಕೆಲಸದೋರ್ನ ಬಿಡಿಸಬಾರ್ದೂಂತ. ಲಾಯರ್ ಮನೆ ಅಮ್ಮಾವ್ರು ಏಳಿದ್ರು. ನಾನೂ ಕೋರ್ಟ್‌ನಾಗೆ ಕೇಸ್ ಹಾಕೋಣಾಂತ ಇದೀನಿ" ಅಂತ ಗುಡುಗಿದಳು.

ಓಹೊ ! ಯಾವತ್ತು ಕ್ಲಬ್‌ನಲ್ಲಿ Quizನಲ್ಲಿ ಅವಳಿಗಿಂತ ನನಗೆ ಎರಡು ಪಾಯಿಂಟ್ ಜಾಸ್ತಿ ಬಂತೋ, ಅವತ್ತಿಂದ ಆ ಮಿಸಸ್ ಲಾಯರ್‌ಗೆ ನನ್ನ ಕಂಡ್ರೆ ಅಷ್ಟಕ್ಕಷ್ಟೇ. ಅದಕ್ಕೇಂತ ಕೆಲಸದವಳನ್ನ ನನ್ನ ಮೇಲೆ ಈ ತರಹ ಎತ್ತಿ ಕಟ್ಟಬೇಕೆ ? ನನಗೋ ದಿಕ್ಕೇ ತೋಚಲಿಲ್ಲ.

ಬೇಗ ಹೊರಗೆ ಬಂದು. "ಆದೇನೇ ರಂಗೀ, ಹಾಗೆ ಮಾತಾಡ್ತೀಯಾ ! ಎಷ್ಟು ಸಹಾಯ ಮಾಡಿದೀನಿ ನಿಂಗೆ ? ಸ್ವಲ್ಪಾನಾದ್ರೂ ನೆನೆಸಿಕೋಬಾರ್ದೆ ?" ಅಂತ ಕೋಪದಿಂದ ಕೇಳಿದೆ.

ಅಷ್ಟೇ ! ಮೀಟಿಂಗಿನವರೆಲ್ಲಾ ಎದ್ದೇಬಿಟ್ಟರು. "ಅಮ್ಮಾವ್ರಿಗೆ ಧಿಕ್ಕಾರ ! ನಮಗೆ ಬೇಕು ಸಹಕಾರ !" ಅಂತ ಮುಗಿಲು ಮುಟ್ಟೋ ಹಾಗೆ ಮೊಳಗಿದರು. ಅಲ್ಲಿಂದ ಕಾಲು ಕಿತ್ತವಳು, ಮನೆ ಮುಟ್ಟೋ ತನಕ ನಿಲ್ಲಲಿಲ್ಲ. ಏದುಸಿರು ಬಿಡುತ್ತಾ ಬಾಗಿಲು ಜಡಿದೆ. ಗುಂಪು ಮನೆ ಮುಂದೆಯೇ ಘೇರಾಯಿಸಿತು.

"ಧಿಕ್ಕಾರ ! ಧಿಕ್ಕಾರ !" ಎಂಬ ಕೂಗು ಕೇಳಿ ನಡುಗಿ ಹೋದೆ. "ಅಯ್ಯೋ ! ಭಗವಂತಾ ! ಇನ್ನೇನ್ಗತಿ ? ಇವರೂ ಮನೇಲಿಲ್ಲ. ಅಕ್ಕಪಕ್ಕದವರು ಅಣಕಿಸೋ ಹಾಗಾಯಿತೆ ? ಅಯ್ಯಯ್ಯೋ !"

"ಛೆ ! ಛೆ ! ಇದೇನೇ ನಿನ್ನ ಅವತಾರ ? ರಾತ್ರಿ 11 ಗಂಟೇಲಿ 'Dracula ಹಾರರ್ ಮೂವಿ ಹಾಕ್ಕೊಂಡು ನೋಡ್ಬೇಡಾ ಅಂದ್ರೆ ಕೇಳಿದ್ಯಾ ? ಈಗ್ನೋಡು ನಿದ್ದೇಲಿ 'ಅಯ್ಯೋ ಅಯ್ಯೋ ಅಂತ ಕಿರುಚೋದು ! ಏನು ಹೆಂಗಸ್ರೊ !" ಅಂತ ಗೊಣಗಿಕೊಂಡೇ ಯಜಮಾನರು ದೀಪ ಹಾಕಿದರು. ಅಬ್ಬಾ ! ಎಲ್ಲಾ ಕನಸೆ ? ಸದ್ಯ ಬದುಕಿದೆ ! ರಂಗಮ್ಮ ಯಾವಾಗಲಾದ್ರೂ ಬಂದುಕೊಳ್ಳಲಿ. ಬಿಡಿಸಲೇ ಬಾರದು ಅವಳನ್ನು ಅಂದುಕೊಂಡೆ. ಧಾರಾಳವಾಗಿ ಬೆವರಿಳಿದಿತ್ತು. "ಛಿ ! ಬೆಂಗಳೂರಲ್ಲೂ ಇಂಥಾ ಶೆಖೆ !" ಅಂದುಕೊಂಡು ಮಗ್ಗುಲಾದೆ.



ಹೋದಸಲ ಪರೀಕ್ಷೆಗೆ ಕುಳಿತಿದ್ದ ವಿದ್ಯಾರ್ಥಿಯೊಬ್ಬನು ಹನ್ನೊಂದು ಗಂಟೆ
ಐದು ನಿಮಿಷ ಆದಾಗ ಪರೀಕ್ಷೆಯ ಸೂಪರಿಂಡೆಂಟರನ್ನು ಕುರಿತು
"ಏನು ಸಾರ್ ಐದು ನಿಮಿಷ ಆಗಿಹೊಯ್ತು ಇನ್ನೂ
ಕೊಶ್ಚನ್ ಪೇಪರ್ ಕೊಡಲಿಲ್ಲ. ನೀವು ಬೇಗ
ಕೊಡ್ತೀರೋ ಅಥವಾ ಉತ್ತರ ಬರೆಯುಕ್ಕೆ
ಶುರು ಮಾಡೋಣ್ವೊ ?" ಅಂತ ಕೇಳಿದನಂತೆ

— ಕೊರವಂಜಿಯಿಂದ


ಪೆಟ್ರೋಲ್ ಇಲ್ಲ
ಈ ಸದ್ದಾಂಗೆ ವಿನಾಶ ಕಾಲ ಬಂದಿದೆ......
ಶ್ರೀನಿವಾಸುಲು

# ಹೂರಣ ಪುರಾಣ

ಕಮಲಾ ರಾಮಸ್ವಾಮಿ

---

"ಹೋಗಿದ್ಯೆನೋ ಸೀತಮ್ಮನ ಮನೇಗೆ ?" ಒಳಗಿನಿಂದ ಅಜ್ಜಿ ಕೂಗಿದರು.

"ಹೋಗಿದ್ದೆ. ಹೇಳಿ ಬಂದೆ ಅಜ್ಜಿ" ವಿಶ್ವ ತರಾತುರಿಯಲ್ಲಿದ್ದ, ಕ್ರಿಕೆಟ್ ಮ್ಯಾಚ್. ಹತ್ತು ಘಂಟೆಗೆ ಅವನು ಅಲ್ಲಿರಬೇಕು.

"ಅಲ್ರೋ! ಏನಂತ ಹೇಳ್ದೆ ?" ಅಜ್ಜಿ ಒಳಗಿನಿಂದ ಬಂದ್ರು.

"ನೀವು ಹೇಳಿದ್ದೇ ಹೇಳ್ದೆ. ಕ್ಯಾಲೆಂಡರ್‌ನಲ್ಲಿ ಆ ತಾರೀಖಿನ ಹತ್ರ ಭಾಗೀರತಮ್ಮ ಅಂತ ಬರ್ಕೊಂಡು, ಒಂದು Circle ಹಾಕಿದ್ರು, ಕಳಸ್ತೀನಿ ಅಂದ್ರು."

"ಹಾಗಾದ್ರೆ ಸೀತಮ್ಮ ಇರಲಿಲ್ವೇ ?"

"ಅಜ್ಜಿ, ಅವರ ಮನೇಲೇ ಇದ್ದೋರು ಹೇಳಿದ್ರು. ಆಕೆ ಐದು ಘಂಟೆಗೇ ಹೊರಟುಹೋಗಿದ್ರು. ಹೇಳ್ತೀವಿ ಅಂದ್ರು. ನಂಗೆ ತುಂಬಾ ಕೆಲ್ಸ. ಬರ್ತೀನಿ" ಅಂತ ಒಂದೇ ಹಾರಿಗೆ ಸೈಕಲ್ ಮೇಲೆ ಕುಳಿತು ಹೊರಟೇ ಬಿಟ್ಟ.

"ಉಸ್ಸಪ್ಪಾ" ಅಜ್ಜಿ ನಿಟ್ಟುಸಿರಿಟ್ಟರು.

"ಯಾಕಜ್ಜಿ ಒದ್ದಾಡ್ತೀರಿ ? ಒಬ್ಬಟ್ಟು ಇಲ್ದೇ ಇದ್ರೆ ಪ್ರಪಂಚ ಮುಳುಗುತ್ತ್ಯೆ? ಎಷ್ಟು ತರಹ Sweets ಇದೆ. ಇದಕ್ಕೆ ಯಾಕೆ...."

ಮೊಮ್ಮಗಳು ಶೀಲಾಳ ಮಾತಿಗೆ, ಅಜ್ಜಿ ತಡೆ ಹಾಕಿದ್ರು.

"ಮಗೂ; ನಿಂಗೆ ಅದೆಲ್ಲಾ ತಿಳೀದು. ಮರಿಮಗನ್ನ ನೋಡೋದೇ ಮಹಾ ಪುಣ್ಯ. ಊರಿಂದ ಕೂಸನ್ನ ನೋಡೋಕೆ ಬೀಗ್ರು, ನೆಂಟ್ರು ಬಂದಾಗ ಔತಣ ಮಾಡಬೇಡ್ವೆ ? ಇದೆಲ್ಲಾ ಶುಭ, ಶ್ರೇಯಸ್ಸು...." ಭಾಗೀರತಮ್ಮ ಅಡಿಗೆ ಮನೆಗೆ ಹೋದರು.

ಭಾಗೀರತಮ್ಮ ಅಂದ್ರೆ, "ಅಬ್ಬಾ! ಎಂಥಾ ಹೆಂಗ್ಸು" ಎಂದು ಉದ್ಗರಿಸದೇ ಇದ್ದ ಅವರ ಪರಿಚಯಸ್ಥರೇ ಇಲ್ಲ. ಬಹಳ Assertive. ಹಿಡಿದ ಕೆಲಸ ಬಿಡದ, ಸಾಧಿಸಿದ ಮಹಿಳೆ. ಅರಿತು, ನುರಿತು, ನರೆತು ಬಾಳ ದೋಣಿಗೆ ಹುಟ್ಟು ಹಾಕಿದಾಕೆ..

"ಆಲ್ವೇ ನರ್ಸೂ, ಈ ಹುಡುಗ ಸರ್‍ಯಾಗಿ ಹೇಳದ್ನೊ ಇಲ್ವೊ. ನಾನೇ ಹೋಗಿ ಬರ್ಲೇ ?" ಸೊಸೆಯನ್ನ ಕೇಳಿದ್ರು ಅಜ್ಜಿ.

"ಯಾಕೆ ಯೋಚ್ನೆ ಮಾಡ್ತೀರಿ ? ಸೀತಮ್ಮ ಬರ್ದೇ ಇದ್ರೆ ಬೆಂಗ್ಳೂರು ಹಾಳೆ? ನಾಳೆ ಬೆಳಿಗ್ಗೆ ನೋಡೋಣ. ಬರ್ದಿ ಇದ್ರೆ ಗೊತ್ತೇ ಇದೆ" ನರ್ಸೂ ಸಮಾಧಾನ ಮಾಡಿದಳು.

* * *

ಬೆಳಿಗ್ಗೆ ಆರು, ಆರೂಕಾಲಾಗಿರಬಹುದು. ಬಾಗಿಲಿಗೆ ನೀರು ಹಾಕುತ್ತಿದ್ದ ಭಾಗೀರತಮ್ಮ, ಅಪರಿಚಿತನೊಬ್ಬ ಬಂದದ್ದು ನೋಡಿ, "ಯಾರು ?" ಎಂದ್ರು.

"ನಾನು, ನಾಗ್ರಾಜ ಅಂತ. ಸೀತಮ್ಮ ಕೊಟ್ಟಿರೋದು ಇದ್ಯೇ ಅಡ್ರೆಸ್ಸೆ ?" ಕೊಳಕು ಚೀಟಿಯೊಂದನ್ನು ತೋರಿಸಿದ.

"ಹೌದು, ಹೌದು. ಒಳ್ಗೆ ಬಾ" ಸಂಭ್ರಮದಿಂದ ಅಜ್ಜಿ ಒಳಗೆ ಸ್ವಾಗತಿಸಿದರು.

ಕೈಯಲ್ಲಿದ್ದ ಕೊಳೆ ಬ್ಯಾಗ್‌ನಲ್ಲಿ ಜಾಲರಿ ಸೌಟು, ಮುಗಚುವ ಕೈ ಇಣಕಿತ್ತು.

"ಒಬ್ಬಟ್ಟು ಮಾಡಲು ಹೇಳಿದ್ರಂತೆ...,"

"ಹೌದು. ಆದ್ರೆ ಸೀತಮ್ಮ ಎಲ್ಲಿ ?"

"ನೀನು ಹೂರಣ ರುಬ್ಬಿ, ಹಿಟ್ಟು ಕಲಸಿರು, ಬರ್‍ತೀನಿ, ಅಂದಿದ್ದಾರಮ್ಮ"

"ಸರಿ ಹಾಗಾದ್ರೆ ಒಳ್ಗೆ ಬಾ. ಹಿಂದಿನ ವರಾಂಡದಲ್ಲಿ ಕೆಲ್ಸ ಶುರು ಮಾಡು" ಭಾಗೀರತಮ್ಮ Order ಮಾಡಿದ್ರು.

ಅವನ್ನ ಒಳ್ಗೆ ಕಳ್ಸಿ, "ಲೇ ನರ್ಸೂ. ಸೀತಮ್ಮ ಒಬ್ಬಟ್ಟಿಗೆ ಬರ್‍ತಾರಂತೆ, ಅವ್ರ ಕಡೆ ಹುಡುಗ ಬಂದಿದ್ದಾನೆ. 12 ಕಾಯಿಗೆ ಮಾಡ್ಸೋಣವೊ, 16 ಕಾಯಿ ಕೊಡಲೋ ?"

"ಮಾಡ್ಕೊಂಡಾಗ ಒಂದಿಷ್ಟು ಧಾರಾಳವಾಗಿ ಮಾಡ್ಬಿಡ್ರೆ ವಾಸಿ. ಬರೋ ಹೋಗೋ ಮನೆ.,.. ಕಮ್ಮಿ ಬಂದ್ರೆ ಕಷ್ಟ."

ಸರಿ. ಭಂಟ ಕೆಲಸಕ್ಕೆ ಇಳಿದ. ಬಲಿತ 16 ಕಾಯಿ ಕ್ಷಣ ಮಾತ್ರದಲ್ಲಿ ತುರಿದು ಹಾಕ್ದ. ಬೆಲ್ಲದ ಪಿಂಡಿಯಿಂದ ಬೆಲ್ಲ ತೆಗೊಂಡು ರುಬ್ಬಲು ಕೂತ.

"ನುಣ್ಣಗೆ ರುಬ್ಬು. ಹೂರಣದಲ್ಲಿ ಕಾಯಿ ತುರಿ ನುರಿದೇ ಇದ್ರೆ, ಒಬ್ಬಟ್ಟು ತೆಳ್ಳಗೆ ಲಟ್ಟಿಸಕ್ಕೆ ಆಗಲ್ಲ" ಅಜ್ಜಿಯ ಆದೇಶ.

ಸುಮಾರು 11 ಘಂಟೆ ಹೊತ್ಗೆ ನಾಗ್ರಾಜ ಹೂರಣ ಬಾಡಿಸಲು ಕೂತ, ಆಗಲೇ ಎರಡು ಸೇರು ಚಿರೋಟಿ ರವೆನ ಒಂದು ಕೆ. ಜಿ. Refined oil ನಲ್ಲಿ ಕಲ್ಸಿಟ್ಟಿದ್ದ.

"ಘಂಟ ಹನ್ನೆರಡಾದರೂ ಸೀತಮ್ಮನ ಸುಳಿವೇ ಇಲ್ವೆ?" ಆತಂಕಗೊಂಡ ಭಾಗೀರತಮ್ಮ ದೇವರ ಕೋಣೆಯಿಂದ ಬಂದು ನೋಡುತ್ತಾರೆ–ಬೆಲ್ಲ ಎಲ್ಲಾ ಖರ್ಚಾಗಿದೆ. ಹೂರಣ ಓಡಿನಲ್ಲಿ ಕೊತ ಕೊತ ಕುದಿಯುತ್ತಿದೆ. "ಏನೋ ಇದು? ಎಷ್ಟು ಬೆಲ್ಲ ಹಾಕಿದ್ಯೊ?" ಗಾಬರಿಯಿಂದ ಕೂಗಿದ್ರು. "ಅಯ್ಯೊ! ಯಾಕೆ ಹಾಗೆ ಭಯ ಬೀಳ್ತೀರಿ? ಕಾಯಿ ತುಂಬಾ ಬಲಿತಿತ್ತು. ಒಂದೆರಡು ಅಚ್ಚು ಬೆಲ್ಲ ಹೆಚ್ಚು ಹಾಕ್ದೆ. ಎಲ್ಲಾರ ಮನಗೂ ಹೂರಣ ಬಾಡಿಸಲು ನಾನೇ ಹೋಗೋದು..."

ಅಜ್ಜಿ. ಅವನ್ನ ಕೆಲಸ ಮಾಡಲು ಬಿಡು. ಮೂರು ಮೂರು ನಿಮಿಷಕ್ಕೆ ನೀನು instructions ಕೊಟ್ರೆ, ಅವನಿಗೆ ಬರೋದೂ ಮರ್‍ತುಹೋಗುತ್ತೆ" ವಿಶ್ವನಿಗೆ ನಾಗ್ರಾಜನ್ನ ನೋಡಿ ಆಯ್ಯೊ ಎನ್ನಿಸಿತ್ತು.

"ಅಲ್ಲಾ ನರ್‍ಸೂ, ಈ ಪೆಡ್ಡೆ ಹುಡುಗನ್ನ ಕಳ್ಸಿ ಆ ಸೀತಮ್ಮ ಇನ್ನೂ ಬರ್‍ದೇ ಇದ್ರೆ, ಹೋಳಿಗೆ ಮಾಡಿ ಮುಗ್ಸೋದು ಯಾವಾಗ?"

"ಶಕ್ತಿ ಮೀರಿ ಕೆಲ್ಸ ಹಚ್ಚಿಕೊಂಡು ಬಿಡ್ತಾರೆ. ಬರ್‍ತಾರೆ ಬಿಡಿ" ಕಳವಳಗೊಂಡ ನರ್‍ಸೂ ಸಮಾಧಾನ ಹೇಳಿದ್ರು.

ಒಂದು ಘಂಟೆಗೆ ರಾಯರು ಊಟಕ್ಕೆ ಬಂದಾಗ್ಲೂ ಹೂರಣವಾಗಿರಲಿಲ್ಲ, ಎಲ್ರೂ ಊಟಕ್ಕೆ ಕುಳಿತಾಗ, ಅಡಿಗೆ ಮನೆಯಿಂದ "ರವೆ" ಅಂತ ಬರೆದಿದ್ದ ಡಬ್ಬಿ ಎತ್ತಿಕೊಂಡು ಬಂದ ನಾಗ್ರಾಜ. ಪಾಕ ಗಟ್ಟಿಯಾಗಬೇಕಾದ್ರೆ ರವೆ ಹಾಕ್ಬೇಕು ಅಂತ ಎಂದೋ. ಯಾರೋ ಹೇಳಿದ್ದು ನೆನಪಿಗೆ ಬಂದಿತ್ತು. ಪಾಕಕ್ಕೆ ಬೇಗ ಬೇಗ ಸುರಿದ.

ಅಷ್ಟೊತ್ತಿಗೆ ಸರ್ರ್ಯಾಗಿ ಭಾಗೀರತಮ್ಮ ಹಾಜರು. "ಏನು ಮಾಡ್ತಾ ಇದ್ದೀಯೋ ? ಬೆಳಿಗ್ಗೆ ಆರು ಘಂಟೆಯಿಂದ ಕೂತಿದ್ದೀ ದೆವ್ವದ ಹಾಗೆ. ಅದೇನೋ ಅದು ಬೆಳ್ಳ ಬೆಳ್ಳಗೆ ಪಾಕದಲ್ಲಿ!" ಖಾಲಿ ರವೆ ಡಬ್ಬ ನೋಡಿದ್ರು. "ಅಯ್ಯೋ ರವೆ ಹೊಯ್ದಿದ್ದೀಯೇನೋ ಗೂಬೆ...."

ಅಜ್ಜಿ ಅರಚಾಟ ಕೇಳಿ ಊಟಕ್ಕೆ ಕೂತೋರೆಲ್ಲಾ ಓಡಿಬಂದ್ರು. "ಬೆಲ್ಲ ಸರಿಯಿಲ್ಲಾಮ್ಮಾ ! ತಾಳಿ. ಸೀತಮ್ಮನ್ನ ಕರ್ಕೊಂಡು ಬರ್ತೀನಿ" ನಾಗ್ರಾಜ ಅಂಗಲಾಚಿದ.

"ಹೂಂ....ನಿನ್ನ ಹೊರಗೆ ಬಿಡ್ತೀನೇನೋ. .. ಮಗನೇ ! ನೀನೆಲ್ಲೇ ಕೂತಿರು, ಸೀತಮ್ಮನ ಕಿವಿ ಹಿಡ್ದು ಎಲ್ಲಿದ್ರೂ ಕರ್ಕೊಂಡು ಬರ್ತೀನಿ. ಎಂಥಾ ಅನಿಷ್ಟ ದ್ರಾಬೇನ ಕಳ್ಸಿದ್ದಾರೆ....ತಾಳು. ಬಂದೇ"

"ನಾಣಿ, ನನ್ನ ಸೀತಮ್ಮನ ಮನೆಗೆ ಕರಕೊಂಡು ಹೋಗು." ಅಜ್ಜಿ ನಾಣಿ ಜೊತೆ ಹೋಗುವ ಮೊದ್ಲು ನಾಗ್ರಾಜನ Bag ಅನ್ನ ಕೋಣೆ ಒಳಗೆ ಇಟ್ಟು ಭದ್ರ ಪಡಿಸಿದ್ರು! ಅವ್ನ ಬಟ್ಟೆ, ಸೌಟುಗಳು ಅದರಲ್ಲೇ ಇದ್ವು. "ಅವನ್ನ ಹೊರಗೆ ಹೋಗುಕ್ಕೆ ಬಿಡಬೇಡ" ಸೊಸೆಗೆ ಅಪ್ಪಣೆ ಮಾಡಿ ಹೊರಟರು.

ನಾಗ್ರಾಜನ ಮುಖ ನೋಡಿ ಸರ್ರೂಗೆ "ಅಯ್ಯೊ" ಅನ್ನಿಸಿತು. "ಹೋಗ್ಲಿ ! ಸೀತಮ್ಮ ಬರೋ ಹೊತ್ಗೆ ಊಟ ಮಾಡಿರು" ಎಲೆ ಹಾಕಿದ್ರು.

ಹತ್ತೇ ನಿಮಿಷದಲ್ಲಿ ಅಜ್ಜಿ ಹಿಂದಿರುಗಿದರು.

"ಅವನ ಚಪ್ಲಿ ಇಲ್ಲೇ ಇದೆ ಕಣೋ ! ತಾಳು ಮಾಡ್ತೀನಿ" ಕೋಪಾವೇಶದಿಂದ ಒಳ್ಗೆ ಬಂದ್ರು. ಹಿಂದಿನ ವರಾಂಡಕ್ಕೆ ನುಗ್ಗಿದ್ರು.

"ಅಯ್ಯೊ! ಏನಾದ್ನೆ ಆ ನಾಗ್ರಾಜ ?"

ಎಲ್ರೂ ಓಡಿ ಬಂದ್ರು. ಚಿಕ್ಕ ಪಡಸಾಲೆ ಖಾಲಿ. ರವೆ ಜೀರ್ಕೊಂಡು ಓಡು ತುಂಬಿದ್ದ ಪಾಯಸ ಒಂದೆಡೆ ತಣ್ಣಗಾಗಿತ್ತು.

"ಚಿಕ್ಕಿ ಹಿಂದುಗಡೆ ಕೆಲ್ಸ ಮಾಡ್ತಾ ಇದ್ರೈಲ್ಲಾ, ನೋಡ್ಲಿಲ್ವೇನೇ ಅವನ್ನ?" "ಊಟ ಮಾಡ್ತಿದ್ದ ಆವಯ್ಯ. ಆಮೇಕೆ, ಎಲೆ ಎಸೆಯೋಕೆ ಹಿತ್ಲಾಗೆ ಓದ್ರು. ನಾನು ಬಟ್ಟಲು ತೊಳೆಯೋಕೆ ಬಂದೆ...."

"ಸರಿ ಸರಿ. ಹಿತ್ತಲ ಕಾಂಪೌಂಡ್ ಹಾರಿ ಹೋಗಿದ್ದಾನೆ" ರಾಯರು ಅರ್ಥೈಸಿದರು.

"ಸೀತಮ್ಮ ಸಿಕ್ಕಿದ್ರೆ ?" ನರ್ಸು ಕಳಕಳಿಯಿಂದ ಕೇಳಿದಳು.

"ಸೀತಮ್ಮ ಊರಿಗೆ ಹೋಗಿದ್ದಾರಂತೆ" ಬರಲು ಇನ್ನೂ ಮೂರು ದಿನ ಆಗುತ್ತೆ.

ವಿಶ್ವ ಹೋದಾಗ ಈ ಪ್ರಾರಬ್ಧ ಇತ್ತು. ಅದನ್ನ ಪರಿಚಾರಿಕೆಗೆ ಇಟ್ಕೊಂಡಿದ್ದಾರಂತೆ. ಒಬ್ಬಟ್ಟೇನು ಮಹಾ, ಬಿಟ್ರೆ First class ಆಗಿ ಮಾಡ್ತೀನಿ ಅಂತ ಜಂಭ ಕೊಚ್ಚಿಕೊಳ್ತಾ ಇದ್ದವಂತೆ. ವಿಶ್ವ ಹೋದಾಗ ಯಾರೂ ಇರ್ಲಿಲ್ಲ. ಸರಿ ಒಂದು Chance ನೋಡೋಣ. ಗಿಟ್ಟಿದ್ರೆ ಜೀವನ ಸುಗಮ ಅಂದ್ಕೊಂಡು ಬಂದ...." ಅಜ್ಜಿ ಪ್ರಲಾಪಿಸುತ್ತಿದ್ದರು.

ನಾನಾ ರೀತಿ ಮೋಸ, ತಟವಟಗಳು ದಿನಾ ಈ ಪಟ್ಟಣದಲ್ಲಿ ನಡೆಯುವುದನ್ನು ಪೇಪರಿನಲ್ಲಿ ಓದಿರ್ತೀರ. ಆದರೆ ಈ Field ನಲ್ಲಿ ಆಗಿರೋದು ವರದಿ ಆಗಿಲ್ಲ. ಆದ್ದರಿಂದ ಅಪರಂಜಿ ಓದುಗರಿಗೆ ಎಚ್ಚರಿಕೆ ಹೇಳಲು ಈ ಪ್ರಕರಣ ವರದಿ ಮಾಡಿದೆ.



---

"ಈ ಬಿಸ್ಕತ್ತು ತಿಂದರೆ ಹೊಟ್ಟೆಗೇನೂ ಆಗೋದಿಲ್ವೇನಪ್ಪಾ?"
"ಅದಕ್ಕೇ ನಾನು ಓವಂ ವಾಟರ್ನೂ ಮಾರುತ್ತಿದ್ದೇನಲ್ಲಾ!"

—ಕೊರವಂಜಿಯಿಂದ

---

# ಬಾರ್–ಸಮಾಜ ಶಾಸ್ತ್ರ

ಶಿವು

---

ಆ ಸಂಜೆ ಯಾಕೋ ವಿಪರೀತ ಛಳಿ. ಹಿಮ ಬೇರೆ ಸುರಿಯುತ್ತಿತ್ತು. ಹಾಗಾಗಿ ಕ್ಲಬ್ಬಿನ ಹುಲ್ಲುಗಾವಲೆಲ್ಲಾ ಖಾಲಿ. ನಾವೆಲ್ಲಾ ಬಾರಿನಲ್ಲಿ ಬೆಚ್ಚಗೆ ಕುಳಿತು ಅದೂ ಇದೂ ಮಾತನಾಡುತ್ತಿದ್ದೆವು. ದೇವಾನಂದಾನಿ ಇನ್ನೂ ಬಾರಿಗೆ ಬಂದಿರಲಿಲ್ಲ. ಈ ವರ್ಷ ಅವನು ನಮ್ಮ ಕ್ಲಬ್ಬಿನ ಆನರರಿ (ಅಥವಾ ಹಾನರರಿ) ಟ್ರೆಷರರ್ ಆ ಸಂಜೆ ದೇವು ಬಾರಿನ ಪಕ್ಕದ ಆಫೀಸ್ ರೂಮಿನಲ್ಲಿ ಕುಳಿತು ತಿಂಗಳ ಲೆಕ್ಕವನ್ನೆಲ್ಲಾ ಪರಿಶೀಲಿಸತೊಡಗಿದ್ದ. ನಾವೆಲ್ಲಾ ಅವನು ಲೆಕ್ಕ ಮುಗಿಸಿ ಬರೋದನ್ನೇ ಕಾಯುತ್ತಾ ಇದ್ವಿ. ಎಷ್ಟೇ ಜನ ಇದ್ರೂ ದೇವು ಇಲ್ದೇ ಇದ್ರೆ ನಮ್ಮ ಸಭೆಗೆ ಕಳೆ ಕಟ್ಟೋದಿಲ್ಲ ಅನ್ನೋ ಸಂಗತಿ ಪ್ಲೇಟೋರನದರಂತೆ ಒಂದು ಸ್ವತಃಸಿದ್ಧ ಪ್ರಮಾಣ.

ಇದ್ದಕ್ಕಿದ್ದ ಹಾಗೆ ಬೇರರ್ ಜೋಸೆಫ್ ಆಫೀಸ್ ರೂಮಿನಿಂದ ಬಾರಿಗೆ ಬಂದ. ಬಂದೋನೇ ಸೀದಾ ಅರುಣನ ಹತ್ತಿರ ಹೋಗಿ ಅವನ ಕಿವಿಯಲ್ಲಿ ಏನೋ ಪಿಸುಗುಟ್ಟಿದ. ಅರುಣನ ಮುಖದಲ್ಲಿ ಮೂಡಿದ್ದ ಪ್ರಶ್ನಾರ್ಥಕ ಚಿಹ್ನೆ ಹಾಗೇ ಉಳಿದಿತ್ತು. ಜೋಸೆಫ್ ಹಾಗೆ ಹೋದ ಮೇಲೆ, ಅರುಣ ಗಂಟಲು ಸರಿಪಡಿಸಿಕೊಂಡು ಶುರು ಮಾಡಿದ.

"ಮಿತ್ರರೇ, ಈ ಕ್ಷಣವೇ ನೀವೆಲ್ಲಾ ನಿಮ್ಮ ನಿಮ್ಮ ಗ್ಲಾಸುಗಳನ್ನ ಐದು ನಿಮಿಷಗಳ ಕಾಲ ಬಾರಿನ ಒಳಗೆ ಕೊಟ್ಟು, ಮುಂದಿನ ಟೇಬಲ್ಲನ್ನು ಖಾಲಿ ಮಾಡಬೇಕೆಂದು ಟ್ರೆಷರರ್ ಸಾಹೇಬರ ಅಪ್ಪಣೆಯಾಗಿದೆ. ದೇವಾನಂದಾನಿಯವರೇ ಸ್ವತಃ ಬಂದು ಈ ವಿಚಿತ್ರ ಆಜ್ಞೆಗೆ ಕಾರಣ ತಿಳಿಸುತ್ತಾರಂತೆ. ಅನಂತರ ನಿಮ್ಮ ಗ್ಲಾಸುಗಳನ್ನ ಮರಳಿ ಪಡೆಯಬಹುದು"

ಇದೇನು ಹೊಸ ಆಟವಪ್ಪಾ ಅನ್ನಿಸಿದರೂ, ಹೇಳಿದ್ದನ್ನು ಚಾಚೂ ತಪ್ಪದೇ ಮಾಡಿಬಿಡುವ ಜಾಯಮಾನದವರೇ ತುಂಬಿದ್ದ ಆ ಬಾರಿನಲ್ಲಿ ದೇವಾನಂದಾನಿ ಆಜ್ಞೆ ಒಂದೇ ನಿಮಿಷದಲ್ಲಿ ಪಾಲಿಸಲ್ಪಟ್ಟಿತು. ಗ್ಲಾಸುಗಳನ್ನು ಬಾರ್ ಟೆಂಡರ್

ಕೈಗೆ ಕೊಟ್ಟು ಪುನಃ ನಮ್ಮ ಸ್ವಸ್ಥಾನಗಳಲ್ಲಿ ಆಸೀನರಾಗುವ ವೇಳೆಗೆ ದೇವು ಆಫೀಸ್ ಬಾಗಿಲಿನಲ್ಲಿ ಪ್ರತ್ಯಕ್ಷನಾಗಿದ್ದ.

ಒಳಗೆ ಬರುತ್ತಲೇ ಅವನು ತನ್ನ ಕೈಯಲ್ಲಿ ಹಿಡಿದಿದ್ದ ಚೀಟಿಯೊಂದನ್ನು ಮುಂದೆ ಮಾಡಿ ಕನ್ನಡಕ ಧರಿಸಿ, ಮೂಲೆಯಲ್ಲಿದ್ದ ನಿಲು ದೀಪದ ಬಳಿ ಸಾರಿ ಓದಲು ಪ್ರಾರಂಭಿಸಿದ.

"ಅರುಣ. ನೀನು ಎರಡನೇ ಪೆಗ್ಗು ರಾಯಲ್ ಛಾಲೆಂಜ್ ಕುಡಿಯುತ್ತಿದ್ದೆ. ರಮೇಶ, ನೀನಿನ್ನೂ ಮೊದಲನೇ ಪೆಗ್ಗನ್ನು ಮುಗಿಸಿರಲಿಲ್ಲ. ಶಿವು, ನೀನು ಈಗಷ್ಟೇ ಮೂರನೆಯ ಗ್ಲಾಸು ಡ್ರಾಫ್ಟ್ ಬೀರನ್ನು ಹೀರುತ್ತಿದ್ದೆ. ಬಾಲು, ನಿನ್ನ ಮೊದಲ ಜಿನ್ ಈಗ ತಾನೇ ಮುಗಿದಿತ್ತು. ಈಗ ನೀವೆಲ್ಲಾ ಮರಳಿ ನಿಮ್ಮ ನಿಮ್ಮ ವಿಷಗಳನ್ನು ಪಡೆಯಬಹುದು" ಹೀಗೆ ಹೇಳಿ, ದೇವು ತನ್ನ Usual ಸೋಫಾ ದಲ್ಲಿ ಕುಳಿತ.

ನಮಗೆಲ್ಲಾ ಆಶ್ಚರ್ಯವೋ ಆಶ್ಚರ್ಯ. ನಮ್ಮ ಬೆರಗಿಗೆ ಮುಖ್ಯ ಕಾರಣ ದೇವು ಹೇಳಿದ್ದೆಲ್ಲಾ ಶತಾಂಶ ನೂರರಷ್ಟು ಸತ್ಯವಾಗಿತ್ತು. ಅರುಣ ಕುತೂಹಲ ತಡೆಯಲಾರದೆ,

"ಅರೆ, ದೇವು, ಇದೇನೋ ಗೋಗಿಯಾ ಪಾಷಾ ತರಹ ಈ ಗಿಲಿ ಗಿಲಿ ಜಾದೂ ಮಾಡಿಬಿಟ್ಟೆ. ನಾವೆಲ್ಲಾ ಇಂಥದೇ ಪಾನೀಯಾನ ಇಷ್ಟೇ ಕುಡಿದಿದ್ದೀವಿ ಅಂತ ನಿನಗೆ ಹೇಗೆ ಗೊತ್ತಾಯ್ತು ? ಒಂದೆರಡು ಪೆಗ್ ಆದ ಮೇಲೆ ನಾವೇ ಜ್ಞಾಪಕ ಇಟ್ಟುಕೊಳ್ಳೋದು ಕಷ್ಟ. ಅಂಥಾದ್ದರಲ್ಲಿ, ಪಕ್ಕದ ರೂಮಿನಲ್ಲಿ ಮರೆ ಯಾಗಿ ಕೂತಿದ್ರೂ ಇಷ್ಟು ಕರಾರುವಾಕ್ಕಾಗಿ ನೀನು ಹೇಗೆ ಕಂಡುಹಿಡಿದೆ ?" ಅಂತ ಪ್ರಶ್ನಿಸಿದ.

ದೇವು ನಿಧಾನವಾಗಿ ತನ್ನ ವಿಷವನ್ನ ಒಂದು ಗುಟುಕು ಹೀರಿ ಪ್ರಾರಂಭಿಸಿದ : "ಎಲಿಮೆಂಟರಿ, ಮೈ ಡಿಯರ್ ವಾಟ್ಸನ್. ನಾನು ಈಗ ತಾನೆ ಇಷ್ಟು ಯಶಸ್ವಿಯಾಗಿ ನಿಮ್ಮ ಮುಂದೆ ಪ್ರದರ್ಶಿಸಿದ ಪತ್ತೇದಾರಿ ಶಕ್ತಿ, ಸಾಧಾರಣ ಟ್ರಿಕ್ ಅಲ್ಲ. ಭಾರತದ ಸಮಾಜ ವಿಜ್ಞಾನದ ಬಗ್ಗೆ ಅತಿ ಆಳವಾಗಿ ಅಭ್ಯಾಸ ಮಾಡಿರುವ. ಪ್ರೊಫೆಸರ್ ಕಳಿಂಗ ಅವರ ಉದ್ಗ್ರಂಥವೊಂದನ್ನು ನಾನು ಓದಿ ಪಡೆದ ಸಾಮರ್ಥ್ಯ ಇದು"

"ಸವರಾಜ ವಿಜ್ಞಾನಕ್ಕೂ ನಮ್ಮ ಪಾನೀಯಗಳಿಗೂ ಏನು ಸಂಬಂಧ, ಗುರೂ ?" ಎಂದ ರಮೇಶ.

"ಅದೇ ನೋಡು ಪ್ರೊ. ಕಳಿಂಗ ಅವರ ಅದ್ಭುತ ಸಾಧನೆ. ನಿಮಗೇ ಗೊತ್ತಿರೋ ಹಾಗೆ ನೀವೆಲ್ಲಾ ಇಲ್ಲಿ ಹರಟೆ ಹೊಡೀತಾ ಕೂತಿದ್ದಾಗ ನಾನು ಪಕ್ಕದ ಆಫೀಸಿನಲ್ಲಿ ಲೆಕ್ಕಪತ್ರ ನೋಡ್ತಾ ಇದ್ದೆ. ನಿಮ್ಮ ಮಾತುಕತೆಗಳನ್ನು ಕದ್ದು ಕೇಳಿಸಿಕೊಳ್ಳೋದಕ್ಕೆ ಇಷ್ಟ ಇಲ್ದೇ ಇದ್ರೂ ಬಾಗಿಲು ತೆಗೆದದ್ದರಿಂದ ಎಲ್ಲಾ ಸಂಭಾಷಣೆ ಸ್ಪಷ್ಟವಾಗಿ ಕೇಳಿಸ್ತಾ ಇತ್ತು.

ರಮೇಶ ನೀನು ನಮ್ಮ ದೇಶದ ಬಡತನ, ರಾಜಕಾರಣಿಗಳ ಭ್ರಷ್ಟಾಚಾರ ಇವುಗಳ ಮೇಲೆ ಭಾಷಣ ಬಿಗೀತಿದ್ದೆ. ಅರುಣ ಇದಕ್ಕೆಲ್ಲಾ ಮೂಲ ಕಾರಣ ಅನಕ್ಷರತೆ ಮತ್ತು ಹದ್ದು ಮೀರಿದ ಜನಸಂಖ್ಯೆ ಅಂತ ಮೇಜು ಕುಟ್ಟಿ, ಕೂಗುತ್ತಿದ್ದ, ಶಿವು ಯಥಾ ಪ್ರಕಾರ ಅಧ್ಯಾತ್ಮದ ಅಗತ್ಯತೆ, ಮೆಡಿಟೇಷನ್ನಿನಿಂದ ನಮ್ಮ ದೇಶದ ಆತ್ಮವನ್ನು ಉದ್ಧಾರ ಮಾಡುವ ಮಾರ್ಗದ ಬಗ್ಗೆ ಉಪ ದೇಶಕ್ಕೆ ತೊಡಗಿದ್ದ. ಬಾಲು ಸ್ವಲ್ಪ ಹೊತ್ತು ಮಾತನಾಡದೇ ಇದ್ದು ಕೊನೆ ಯಲ್ಲಿ, ಆರ್ಟ್ ಫಿಲ್ಮ್, ಶಬಾನಾ, C.H. ಆತ್ಮ, ಗಜಲ್, ಜೀವನದಲ್ಲಿ ಕಲೆಯ ಪಾತ್ರ, ಇವುಗಳೆಲ್ಲದರ ಬಗ್ಗೆ ಕಲಸು ಮೇಲೋಗರಾನ ಹೊಸಾ ತತ್ವ ಕಂಡು ಹಿಡಿದೋನಂತೆ ಆವೇಶದಿಂದ ಹೇಳುಕ್ಕೆ ಶುರು ಹಚ್ಚಿದ. ಇದೆಲ್ಲಾ ನಾನು ಕೇಳಿಸ್ಕೊಳ್ತಾ ಇದ್ದ ಹಾಗೆ, ಪ್ರೊ. ಕಳಿಂಗ ಅವರ ಶಾಸ್ತ್ರ ಗ್ರಂಥ ನೆನಪಿಗೆ ಬಂತು. ಅದೃಷ್ಟವಶಾತ್ ಅದರದ್ದೊಂದು ಕಾಪಿ ಆಫೀಸಿನಲ್ಲೇ ಇತ್ತು. ಅದರ 74ನೇ ಪುಟ ತೆಗೆದು ರೆಫರ್ ಮಾಡಿದೆ. ಆ ಅಧ್ಯಾಯದಲ್ಲಿ ನಮ್ಮ ದೇಶದ So called ಬುದ್ಧಿಜೀವಿಗಳು, ಬಾರುಗಳಲ್ಲಿ ಕುಳಿತು ಕುಡಿಯಲು ಪ್ರಾರಂಭಿಸಿದ ಅನಂತರ, ಯಾವ ಮದ್ಯವನ್ನು ಎಷ್ಟು ಸೇವಿಸಿದ ಅನಂತರ, ಭಾರತದ ಯಾವ ಸಮಸ್ಯೆಯ ಬಗ್ಗೆ ಮಾತನಾಡುತ್ತಾರೆಂಬುದನ್ನು ವೈಜ್ಞಾನಿಕವಾಗಿ ಸರ್ವೆ ನಡೆಸಿ' ಆ ಮಾಹಿತಿಯನ್ನೆಲ್ಲಾ ಕೊಟ್ಟಿದ್ದಾರೆ. ಭಾರತದ ಪ್ರಮುಖ ನಗರಗಳ ಒಂದು ಸಾವಿರಕ್ಕೂ ಹೆಚ್ಚು ಬಾರುಗಳಲ್ಲಿ ನಡೆಸಿದ ಅಧ್ಯಯನ ಇದು. ಇದರ ಪ್ರಕಾರ ಒಬ್ಬ Average ಬಾರಿಗ, ಮೊದಲ ಪೆಗ್ ವ್ಹಿಸ್ಕಿ ಕುಡಿಯುವಾಗ ಭಾರತದ ಬಡತನ ಹಾಗೂ ರಾಜಕಾರಣಿಗಳ ಭ್ರಷ್ಟಾಚಾರಗಳ ಬಗ್ಗೆ ಮಾತನಾಡುವುದು ಖಂಡಿತ. ಎರಡನೇ ಪೆಗ್ ಹೊತ್ತಿಗೆ ಅವನ ಗಮನ ಅನಕ್ಷರತೆ ಹಾಗೂ ಮಿತಿ ಮೀರಿದ ಜನ ಸಂಖ್ಯೆಯ ಕಡೆ ಹರಿದಿರುತ್ತದೆ. ಯಾವುದೋ ಒಂದು ನಿಗೂಢ ಕಾರಣದಿಂದ ಬೀರ್ ಕುಡಿಯುವವರು ಸಾಮಾನ್ಯವಾಗಿ ಅಧ್ಯಾತ್ಮದ ಬಗ್ಗೆ ಮಾತನಾಡಲು ಇಷ್ಟಪಡುತ್ತಾರೆ. ಈ ಗುಂಪಿನ ಜನ ನಿಧಾನಸ್ವರು:

ಹಾಗಾಗಿ ಇವರ ಹಾಗ್ವಾರೆ ಹರಿಯಲು ಮೂರು ಗ್ಲಾಸುಗಳಾದರೂ ಬೇಕು. ಜಿನ್ ಜನಕ್ಕೆ ಮೇಲೆ ಹೇಳಿದ ಯಾವ ವಿಷಯವೂ ರುಚಿಸುವುದಿಲ್ಲ. ಅವರ ಎಲ್ಲಾ ಗಮನ ಸ್ತ್ರೀ ಸೌಂದರ್ಯದ ಮೇಲೆ. ಆದರೆ ಅದರ ಬಗ್ಗೆ ಬಿಚ್ಚು ಮನಸ್ಸಿನಿಂದ ಮಾತನಾಡಲು ನಾಚಿ. ಆರ್ಟ್ ಫಿಲ್ಮ್, ಪ್ಲೇಟಾನಿಕ್ ಪ್ರೇಮ, ಜಾನ್ ಅಪ್‌ಡೈಕ್ ಇವರುಗಳ ಮೇಲೆ ಭಾಷಣ ಕೊರೆಯುತ್ತಾರೆ. ಈಗ ಗೊತ್ತಾಯ್ತೇನೋ ನಾನು ಹೇಗೆ ಪತ್ತೆ ಮಾಡಿದೆ ಅಂತ ?"

ದೇವು ತನ್ನ ದೀರ್ಘ ಭಾಷಣವನ್ನ ಮುಗಿಸಿ, ಒಂದು ಸಿಗರೇಟ್ ಹಚ್ಚಿದ.

"ಇನ್ನೇನು ಬರದಿದ್ದಾರ ಪ್ರೊ. ಕಳಿಂಗ ಅವರು ?" ನಾನು ಕೇಳಿದೆ.

"ಬರದಿದ್ದಾರೆ. ಭಾರತದ ಬುದ್ಧಿಜೀವಿಗಳು ಹೀಗೆ ಬಾರ್‌ಗಳಲ್ಲಿ ಮಾತ ನಾಡಿ ಕಾಲಹರಣ ಮಾಡೋ ಬದಲು, ಮುಂದುವರಿದ ರಾಷ್ಟ್ರಗಳ ಜನಗಳಂತೆ ದಿನಕ್ಕೆ ಹದಿನೆಂಟು ಗಂಟೆ ದುಡಿದು ಬಂದು ಬಾರ್‌ನಲ್ಲಿ ಕುಳಿತಾಗ ಪಾಶ್ಚಿಮಾತ್ಯ ಆರೋಗ್ಯವಂತ ಗಂಡು ಜನಾಂಗದಂತೆ ಸಿನಿಮಾ ತಾರೆಯರ ಅಂಗ ಸೌಷ್ಟವದ ಬಗ್ಗೆ ಆರೋಗ್ಯವಂತ ಚರ್ಚೆ ನಡೆಸೋ ಕಾಲ ಬಂದೇ ಬರುತ್ತೆ ಅನ್ನೋ ಆಶಾಭಾವನೆ ವ್ಯಕ್ತಪಡಿಸಿದ್ದಾರೆ"

ಹಾಗೆಂದು ಹೇಳಿ, ದೇವು ಯಾವುದೋ ಕೆಲಸ ಇದ್ದವನಂತೆ ಎದ್ದು ಹೋದ. ನಾನು ಇನ್ನೊಂದು ಗುಟುಕು ಬೀರ್ ಹೀರಿದೆ.

ಯಾಕೋ, ಮೊದಲಿನಂತೆ ರುಚಿಸಲಿಲ್ಲ.



**ಒಗ್ಗಣೆ** ಗಮಲು ಸೋಂಕಿದೊಡಂ, ಆರೊ ಮೆಲ್ಲಾದೊಡಂ
ಮುಗಿಲು ಮಳೆಗರೆದ ಸುದ್ದಿ ಕಿವಿಪೊಕ್ಕಡಂ "ಬೆಲೆ" ಎಂಬ ಪದ
ಕೇಳ್ದೊಡಂ ತುಂಬಿದ ಚೀಲಮಂ ಕಂಡೊಡಂ, ಪಿಸುಮಾತುಗಳು
ಆದೊಡಂ ಏನೆಂಬೆನ್ ಆರಂಕುಸವಿಟ್ಟೊಳೆದಡಂ ನೆನೆವುದೆನ್ನ ಮನ
ಬೇಯ್ಸು ಬೇಳೆ ಸಿಗುವ ಜಾಗವ

— ಕೊರವಂಜಿಯಿಂದ

# ಗಲ್ಫ್ ಗಾದೆಗಳು

**ಆರತಿ**

ಎಣ್ಣೆ ಬಂದಾಗ ಕಣ್ಣು ಮುಚ್ಚಿಕೊಂಡವಂತೆ (ಗಲ್ಫ್ ನೀರು ಹಕ್ಕಿಗಳು)

*　　　*　　　*

ಇಬ್ಬರ ಜಗಳ; ಮೂರನೆಯವನು, ನಾಲ್ಕನೆಯವನು, ಎಲ್ಲರಿಗೂ ನಷ್ಟ.

*　　　*　　　*

ನೀತಿ ಹೇಳುಕ್ಕೆ ಅಂತ ಆತನ್ನ ಕರೆಸಿದರೆ, ಇಲ್ಲೂ ವಿಯಟ್ನಾಂ ಮಾಡ್ತೀನಿ ಅನ್ನೋದೇ ?

*　　　*　　　*

ಮಾತು ಬಲ್ಲವನಿಗೆ ಜಗಳವಿಲ್ಲ; ಬಾತ್ ನಾಯಕನಿಗೆ ಜಗಳವೇ ಎಲ್ಲಾ.

*　　　*　　　*

ಪೋತನ ಕಣ್ಣು ತೋರಣದ ಮೇಲೆ; ಬುಷ್ಷನ ಕಣ್ಣು ಎಣ್ಣೆಯ ಮೇಲೆ.

*

ಕಿಟಕಿಯಿಂದ ನುಸುಳುವವ. ಹೆಬ್ಬಾಗಿಲಿನಿಂದ ಬಾರನೇ (ಕ್ರೂಯಿಸರ್ ಕ್ಷಿಪಣಿ) ?

*　　　*　　　*

ಸದ್ದಾಂ ಕಾಪು ಕುಲಕ್ಕೆ ಮೃತ್ಯು.

*　　　*

ಕುರುಡನ ಹೆಂಡತಿಗೆ ದೈವವೇ ಕಾವಲು ; ಇರಾಕಿನ ಜನರಿಗೆ ಅಲ್ಲಾನೇ ಕಾವಲು.

*　　　*　　　*

ಎಣ್ಣೆ ಆಸೆ Samಗೆ, ಶಾಂತಿಯ ಆಸೆ ಜಗತ್ತಿಗೆ.



# ನಗ್ನ ಸತ್ಯಗಳ ನಡುವೆ ...

ದೊಡ್ಡರಂಗೇಗೌಡ

## ೧

ಸಮಾಜವಾದಿಗಳು ಪಟ್ಟಭದ್ರರಾದುದ ಕಂಡು
ಹೆಂಡದ ದೊರೆಗಳು "ಪಾನ ನಿರೋಧ"ದ ಬಗೆಗೆ ಮಾತಾಡಿದುದ ಕಂಡು
ಪಂಡಿತರ ಮಕ್ಕಳು ದಡ್ಡರಾದುದ ಕಂಡು
ಪೋಲೀಸರ ಮಕ್ಕಳು ಕಳ್ಳರಾದುದ ಕಂಡು
ಕಂಡಷ್ಟೂ ಗಲಿಬಿಲಿಗೊಂಡ—ಮಣ್ಣಿನ ಮಗ.

## ೨

ಮಾನವತಾವಾದಿ "ಜಾತಿ ರಾಜಕೀಯ" ಮಾಡಿದ್ದ ಕಂಡು
ಮೌಲ್ಯಗಳ ಎತ್ತಿ ಹಿಡಿಯಬೇಕಾದವರು ಅಪಮೌಲ್ಯಗಳ ಬೀಡಾದುದ ಕಂಡು
ಗಾಂಧೀವಾದಿಗಳು ಹಿಂಸೆಗೆ ಪ್ರೇರೇಪಿಸುವುದ ಕಂಡು
ಮಾರ್ಕ್ಸ್‌ವಾದಿಗಳು ಮಹಲುಗಳ ಕಟ್ಟಿದ್ದ ಕಂಡು
ಕಂಡೂ ಕಂಡೂ ರೋಸಿ ಹೋದ—ಮಣ್ಣಿನ ಮಗ.

## ೩

ಆದರ್ಶ ವಿದ್ಯಾ ದೇಗುಲಗಳು "ಸಾಮೂಹಿಕ ಕಾಪಿ ಕೇಂದ್ರ"ವಾದುದ ಕಂಡು
ಕಲೆಯ ಹೆಸರಲ್ಲಿ ಕಲಾ ಕೊಲೆ ಮಾಡಿದುದ ಕಂಡು
ಒಳಗೊಳಗೇ ಎನ್ನಡ, ಎನ್ನಡ ಎನ್ನುವವರು
ಹೊರಗೆ ಕನ್ನಡ ಧ್ವಜ ಹಿಡಿದುದ ಕಂಡು
ಬುದ್ಧಿಜೀವಿಗಳು ಕುಖ್ಯಾತ ಕ್ಷೇತ್ರದಲಿ ಸುದ್ದಿಯಾದುದ ಕಂಡು
ನಮ್ಮ ನೆಲದವರೇ ನಮ್ಮ ನಾಡ ಧ್ವಜ ಸುಟ್ಟಿದುದ ಕಂಡು
ಹಗಲಿರುಳು ಕ್ಷೋಭೆಗೊಂಡ—ಮಣ್ಣಿನ ಮಗ.

# ಪತ್ತೇದಾರಿ ಸಾಹಿತ್ಯ

(ಕನ್ನಡ ಸಾಹಿತ್ಯ ಪರಿಷತ್ ಕೃಪೆ)

ಅ. ರಾ. ಸೇ.

---

ಹೊಸಗನ್ನಡದ ಅನೇಕ ಸಾಹಿತ್ಯ ಪ್ರಕಾರಗಳಂತೆ ಪತ್ತೇದಾರಿ ಸಾಹಿತ್ಯವೂ, ಇಂಗ್ಲಿಷಿನಿಂದ ಬಂದಿತು.

ಇಂಗ್ಲಿಷ್ ಮತ್ತು ಬಂಗಾಳಿ ಭಾಷೆಗಳಿಂದ ಭಾಷಾಂತರ ಹೊಂದಿದ ಪತ್ತೇದಾರಿ ಕತೆಗಳೇ, ಕನ್ನಡದ ಮೊದಲ ಪತ್ತೇದಾರಿ ಪುಸ್ತಕಗಳು.

ವೆಂಕಟಕೃಷ್ಣ ಅಯ್ಯಂಗಾರ್, ಎಂ. ವೆಂಕಟಕೃಷ್ಣಯ್ಯ, ಬಿ. ವೆಂಕಟಾಚಾರ್ಯ, ಕೆರೂರು ವಾಸುದೇವಾಚಾರ್ಯ, ತಿರುಮಲಾಂಬಾ ಮೊದಲಾದವರು ಕನ್ನಡದ ಮೊದಲ ಪತ್ತೇದಾರಿ ಲೇಖಕರು. ವೆಂಕಟಾದ್ರಿ ಶಾಸ್ತ್ರಿ, ಛಿ. ಪ. ಕಾಳೆ, ಬಾಲಸರಸ್ವತಿ ಇವರು ಬರೆದ ಪತ್ತೇದಾರಿ ಕಾದಂಬರಿಗಳು . ಸಾಕಷ್ಟು ಪ್ರಭಾವಶಾಲಿಗಳಾಗಿದ್ದವು.

ಶಿವರಾಮ ಕಾರಂತ, ಶ್ರೀರಂಗರೂ ಪತ್ತೇದಾರಿ ಕಾದಂಬರಿಗಳನ್ನು ಬರೆದವರು. ಮ. ರಾಮಮೂರ್ತಿ, ಟಿ. ಕೆ. ರಾಮರಾವ್ ಆಧುನಿಕ ಕನ್ನಡ ಪತ್ತೇದಾರಿ ಸಾಹಿತ್ಯದ ಪ್ರಮುಖರು.

ಕನ್ನಡದ ಬಹುಪಾಲು ಪತ್ತೇದಾರಿ ಕತೆ ಕಾದಂಬರಿಗಳು ಇಂಗ್ಲಿಷಿನ ರೂಪಾಂತರಗಳು, ವೇಷಾಂತರಗಳು ಎಂಬ ಆಪಾದನೆ ಇದೆ. ಕನ್ನಡದ ಗಂಭೀರ ಸಾಹಿತ್ಯಗಳ ಬಗೆಗೂ ಈ ಆಪಾದನೆ ಇದೆ ಎಂಬುದು ಗಮನಾರ್ಹ.

ಕನ್ನಡದಲ್ಲಿ ಪತ್ತೇದಾರಿ ಸಾಹಿತ್ಯವನ್ನು ವಿಶ್ಲೇಷಿಸುವ ಅಗತ್ಯವಿದೆ ಎಂದು ಒಪ್ಪುವ ನರಹಳ್ಳಿ ಅವರಂಥಾ ವಿಮರ್ಶಕರು ಒಬ್ಬರೋ, ಇಬ್ಬರೋ ಇರಬಹುದು. 'ಸುಧಾ' ಪತ್ರಿಕೆಯ ಯುಗಾದಿ ವಿಶೇಷಾಂಕ (1989) ಪತ್ತೇದಾರಿ ಸಾಹಿತ್ಯವನ್ನು ಪರಿಚಯಿಸಿದೆ. 'ತುಷಾರ'ವೂ ಒಂದು ಸಂಚಿಕೆ ತಂದ ನೆನಪಿದೆ.

## ಇಂಗ್ಲಿಷ್‌ನಲ್ಲಿ ಪತ್ತೇದಾರಿಯ ಉಗಮ, ವ್ಯಾಪ್ತಿ

ಆಧುನಿಕ ನಾಗರಿಕ ಜೀವನದಲ್ಲಿ ಅಪರಾಧದ ಹೆಚ್ಚಳ ಒಂದು ಅನಿವಾರ್ಯ ಭಾಗವಾಗಿದೆ. ಸಭ್ಯತೆಯ ಸೋಗಿನಲ್ಲಿ ತಮ್ಮ ಅಪರಾಧವನ್ನು ಮುಚ್ಚಿಡುವ ವ್ಯಕ್ತಿಗಳು ಲೆಕ್ಕವಿಲ್ಲದಷ್ಟು. ಇದಕ್ಕೆ ಸಾಮಾಜಿಕ, ರಾಜಕೀಯ ಕಾರಣಗಳು ಸುಸ್ಪಷ್ಟ. ಆದರೂ ಕಾನೂನಿನ ದೃಷ್ಟಿಯಲ್ಲಿ ಅಪರಾಧ ಎನ್ನಿಸಿದ ಕೊಲೆ, ಸುಲಿಗೆ, ದರೋಡೆ, ಇತ್ಯಾದಿಗಳನ್ನು ಮಾಡಿದ ಅಪರಾಧಿಗಳನ್ನು ಹಿಡಿದು ಶಿಕ್ಷಿಸುವ ಸಲುವಾಗಿ ಆರಕ್ಷಕ ಇಲಾಖೆಗಳು ಎಲ್ಲ ದೇಶಗಳಲ್ಲೂ ಇವೆ. ಎಲ್ಲೆಡೆಯೂ ಅಪರಾಧದ ಹೆಚ್ಚಳವೂ ಆಗುತ್ತಿದೆ. ಅಪರಾಧಕ್ಕೆ ಬಲಿಯಾಗುವ ನಾಗರಿಕನ ಸಹಾಯಕ್ಕೆ ಒಬ್ಬ ಖಾಸಗಿ ಪತ್ತೇದಾರ ಮಾತ್ರ ಸಹಾಯಕನಾಗಬಲ್ಲ—ಕೊನೆಯ ಪಕ್ಷ ಪತ್ತೇದಾರಿ ಸಾಹಿತ್ಯದಲ್ಲಿ. ಆ ಖಾಸಗಿ ಪತ್ತೇದಾರನು, ವೀಕ್ಷಣೆ, ತರ್ಕ, ಪ್ರತಿಭೆ (intuition) ಗಳನ್ನೊಳಗೊಂಡ ಸೂಪರ್‌ಮನ್. ಆದರವನು ಅಪರಾಧಿ, ಬಲಿ ಪಶು ಮತ್ತು ಆರಕ್ಷಕರಂತೆಯೇ ಮನುಷ್ಯ. ಇಂತಹವನು ಓದುಗರಿಗೆ ಅಚ್ಚುಮೆಚ್ಚಾಗುವುದರಲ್ಲಿ ಏನಾಶ್ಚರ್ಯ ?

ಈಚಿನ ದಿನಗಳಲ್ಲಿ ಅಪರಾಧ, ಬೇಹುಗಾರಿಕೆ, ಕೌತುಕ, ಅದ್ಭುತ ರಮ್ಯ ಕಥಾನಕಗಳೂ ಪತ್ತೇದಾರಿ ಸಾಹಿತ್ಯದ ಪರಿಧಿಯಲ್ಲಿ ಸೇರಿಕೊಂಡಿವೆ.

## ಪಾಶ್ಚಾತ್ಯ ಪತ್ತೇದಾರಿ ಸಾಹಿತ್ಯದ ಸ್ಥೂಲ ಇತಿಹಾಸ

ಪ್ರಸಿದ್ಧ ವಿಮರ್ಶಕ ಮಿಲದ್ವಾ ಅಭಿಪ್ರಾಯದಂತೆ ಈಡಿಪಸ್ ರೆಕ್ಸ್ ಅತಿ ಶ್ರೇಷ್ಠ. ಪತ್ತೇದಾರಿ ನಾಟಕ. ಹತ್ತೊಂಬತ್ತನೆಯ ಶತಮಾನದ ಪೂರ್ವಾರ್ಧದಲ್ಲೇ ಜರ್ಮನಿಯ ಮ್ಯುಲ್ನೆರ್ ಪತ್ತೇದಾರಿ ಕತೆಯನ್ನು ಬರೆದಿದ್ದ. 19ನೆಯ ಶತಮಾನದ ಮಧ್ಯ ಭಾಗದಲ್ಲಿ ಎಡ್ಗರ್ ಅಲೆನ್ ಪೋ, ಐದು ಪತ್ತೇದಾರಿ ಕತೆಗಳನ್ನು ಬರೆದ. ಅದೇ ಶತಮಾನದ ಉತ್ತರಾರ್ಧದಲ್ಲಿ ಸರ್ ಆರ್ಥರ್ ಕಾನನ್ ಡಾಯ್ಲ್, ಶೆರ್ಲಾಕ್ ಹೋಮ್ಸ್‌ನನ್ನು ಸೃಷ್ಟಿಸಿದ. ಶೆರ್ಲಾಕ್ ಹೋಮ್ಸ್ ಪತ್ತೇದಾರರಲ್ಲಿ ಒಂದು ಥರಾ ಸೂರ್ಯನಿದ್ದ ಹಾಗೆ. ಓದಿಸಿಕೊಳ್ಳುವಲ್ಲಿ, ಜನಪ್ರಿಯತೆಯಲ್ಲಿ ಹಾಗೂ ಗುಣಮಟ್ಟದಲ್ಲಿ.

ಅಪರಾಧಿಯನ್ನು ಪತ್ತೆ ಮಾಡುವುದೇ, ಪತ್ತೇದಾರಿಯ ಮೂಲ ಉದ್ದೇಶ. ಆದರೆ ಅಪರಾಧ ಏಕೆ, ಹೇಗೆ ಆಯಿತು ? ಅದರ ವ್ಯಾಪ್ತಿಯನ್ನೂ, ಪರಿಣಾಮಗಳನ್ನೂ ಒಳಗೊಂಡ ಕಾಲ್ಪನಿಕ ಅಪರಾಧ ಸಾಹಿತ್ಯವೂ ಪತ್ತೇದಾರಿಯಲ್ಲಿ ಸೇರಿಕೊಂಡಿತು.

ಕ್ರಮೇಣ ಬೇಹುಗಾರಿಕೆ, ಕೌತುಕಗಳೂ (ಕುತೂಹಲ) ಪತ್ತೇದಾರಿ ಸಾಹಿತ್ಯದ ಪರಿಧಿಯೊಳಗೇ ಸೇರಿದವು. ಸಸ್ಪೆನ್ಸ್ ಥ್ರಿಲ್ಲರ್, ಸ್ಪೈ ಥ್ರಿಲ್ಲರ್ ಇತ್ಯಾದಿಯಾಗಿ ಓದುಗರು ಅವನ್ನು ಕರೆಯುತ್ತಾರೆ. ಲೆಮ್ಮಿ ಕಾರ್ಷನ್ ಮತ್ತು ಜೇಮ್ಸ್ ಬಾಂಡ್ ಈ ಬಗೆಯ ಕಾದಂಬರಿಗಳ ನಾಯಕರು.

ಇಂಗ್ಲಿಷ್‌ನಲ್ಲಿ ಪತ್ತೇದಾರಿ ಸಾಹಿತ್ಯ ವಿಪುಲವಾಗಿದೆ. ಜನಪ್ರಿಯತೆಯ ಉತ್ತುಂಗ ಶಿಖರವನ್ನೇರಿದ ಪತ್ತೇದಾರಿ ಲೇಖಕರ ಹೆಸರು ಜನಪ್ರಿಯ ಸಿನಿಮಾಗಳ ಕ್ಕಿಂತಷ್ಟೇ ದೊಡ್ಡದು. ಇಂದಿಗೂ ಬೆಳೆಯುತ್ತಲೇ ಇದೆ. ಫಾದರ್ ಬ್ರೌನ್ ಖ್ಯಾತಿಯ ಜಿ. ಕೆ. ಚೆಸ್ಟರ್‌ಟನ್, ಫುಟ್ರೇಲ್, ಇ. ಸಿ. ಬೆಂಟ್ಲಿ, ವಾನ್‌ಡೈನ್, ಅಗಾಥಾ ಕ್ರಿಸ್ಟೀ, ಅರ್ಲ್ ಸ್ಟ್ಯಾನ್ಲೆ ಗಾರ್ಡ್‌ನರ್, ರೇಮಂಡ್ ಚಾಂಡ್ಲರ್, ಲೆಸ್ಲಿ ಚಾರ್ಟರಿಸ್, ಚೇಸ್, ಆಯಾನ್ ಫ್ಲೆಮಿಂಗ್, ಲೆಕಾರಿ, ಎಡ್ಗರ್ ವ್ಯಾಲೇಸ್ ಮೊದ ಲಾದವರು ಕೆಲವು ಜನಪ್ರಿಯ ಬರಹಗಾರರು. ಈ ಪಟ್ಟಿಯಲ್ಲಿ ಸೇರದ ಪ್ರಮುಖ ಲೇಖಕರ ಸಂಖ್ಯೆ ಗಣನೀಯವಾಗಿದೆ.

ಇಂಗ್ಲಿಷಿನ ಶೆರ್ಲಾಕ್ ಹೋಮ್ಸ್, ಕನ್ನಡದ ಸರಳಾಕ್ಷ ಪುಲಿ ಮೀಸಿಯಾದ. ಹೋಮ್ಸ್‌ನ ಗಾಂಭೀರ್ಯ ಅವನ ಕನ್ನಡ ಅವತರಣಿಕೆಯಲ್ಲಿ ಉಳಿಯಲಿಲ್ಲವಂತೆ.

## ಕನ್ನಡಕ್ಕೆ ಎರವಾದ (ಕನ್ನಡ) ಪರಂಪರೆ

ಹೊಸಗನ್ನಡದಲ್ಲಿ ಬಂದ ಪತ್ತೇದಾರಿ ಸಾಹಿತ್ಯದ ಆಕರಗಳನ್ನು ವಿದೇಶೀ ಬರಹಗಳಲ್ಲಿ ಹುಡುಕುವೆವಷ್ಟೇ; ಅದು ಸಹಜವೂ ಹೌದು.

ಆದರೆ ಕನ್ನಡದಲ್ಲೇ ಪತ್ತೇದಾರಿ ಹಾಗೂ ಸಸ್ಪೆನ್ಸ್ ಥ್ರಿಲ್ಲರ್‌ನ ಅತ್ಯುತ್ತಮ ಉದಾಹರಣೆಗಳಿವೆ.

ಸೀತಾಪಹರಣದ ಅನಂತರ, ಶ್ರೀ ರಾಮನು ಸೀತಾ ದೇವಿಯನ್ನು ಹುಡುಕುತ್ತಾ ಹೊರಟನಷ್ಟೇ. ಅದಕ್ಕೆ ಬೇಕಾದ ಸುಳಿವುಗಳನ್ನು (Clues). ಜಟಾಯು, ಕಬಂಧ, ಸುಗ್ರೀವಾದಿಗಳಿಂದ ಪಡೆದನಷ್ಟೇ.

ಸುಂದರ ಕಾಂಡವು ಸಂಪೂರ್ಣ ಪತ್ತೇದಾರಿ, ಸಸ್ಪೆನ್ಸ್ ಥ್ರಿಲ್ಲರ್ ಅಲ್ಲವೇ ? ಅದು ನಮಗೆ ಸಕಲೇಷ್ಟಾರ್ಥಗಳನ್ನು ಕೊಡುವ ಪಾರಾಯಣ ಗ್ರಂಥವೆಂಬ ನಂಬಿಕೆ ಇಲ್ಲವೇ ? ಅದು ನಿಜ ತಾನೇ ?

ಪತ್ತೇದಾರನ ಸಹಚರನೊಬ್ಬನು ಪತ್ತೇದಾರಿ ಕತೆಗಳಲ್ಲಿ ಬರುತ್ತಾನೆ. ಹನು ಮಂತನಿಗೆ ಆತನ ಬಾಲವೇ ಸಹಚರ. ಹನುಮಂತನ ಕಾರ್ಯವಿಧಾನ ಅತ್ಯಂತ

ಸಮರ್ಪಕವಾದದ್ದು. ಲಂಕೆಯ ಪ್ರತಿಯೊಂದು ಅಂಗುಲವನ್ನು ಅವನು ಹುಡುಕಿದ. ಮಂಡೋದರಿಯು ಸೀತಾ ದೇವಿ ಇರಬೇಕೆಂದು ಭಾವಿಸಿ ಅವಳ ಅಂಗ ರೇಖೆಗಳನ್ನು ನೋಡಿ ಅವಳು ಸೀತಾ ದೇವಿ ಅಲ್ಲವೆಂದು ನಿರ್ಧರಿಸಿದ.

ಹುಡುಕಿ ಹುಡುಕಿ ಸೋತು, ಅವನು ತನ್ನ ಬಾಲಕ್ಕೆ ಹೇಳಿದ್ದು: "ಎಲೆ ಬಾಲವೇ, ನಾನು ಸೋತು ಸೊಪ್ಪಾದೆ. ನೀನು ಲಂಕೆ ಇರುವ ಈ ತ್ರಿಕೂಟಾಚಲ ವನ್ನೇ ಕಿತ್ತು ತಾ. ಅದನ್ನು ಶ್ರೀ ರಾಮನ ಮುಂದಿಡೋಣ. ಅವನೇ ಸೀತಾ ದೇವಿ ಯನ್ನು ಹುಡುಕಿಕೊಳ್ಳಲಿ.

ಸುಂದರ ಕಾಂಡವು ರಾಮಾಯಣದಲ್ಲೇ ಸುಂದರವಾದ ಭಾಗ. ಅದರ ಕಾವ್ಯ ಸೌಂದರ್ಯ ಅನುಪಮವಾದದ್ದು. ಆದರೂ ಆದರಲ್ಲಿ ಪತ್ತೇದಾರಿಯ ಅಂಶ ಪ್ರಧಾನ ಎಂಬುದನ್ನು ಅಲ್ಲಗಳೆಯಲಾಗುವುದಿಲ್ಲ. ಅದರ ಆಧ್ಯಾತ್ಮಿಕ ಗಾಂಭೀರ್ಯದ ಮುಂದೆ ಪತ್ತೇದಾರಿ ಗೌಣವೆನಿಸಿದೆ, ಅಷ್ಟೇ. (ತೊರವೆ ರಾಮಾಯಣವನ್ನು ನೋಡಿ.)

ಕುಮಾರ ವ್ಯಾಸ ಭಾರತದ ಸೈಂಧವ ವಧೆ, ಸಿದ್ಧವಾಗಿರುವ ಸಸ್ಪೆನ್ಸ್ ಥ್ರಿಲ್ಲರ್. ಎಷ್ಟು ಬಾರಿ ಓದಿದರೂ ಆಸಕ್ತಿ ಹೋಗದಿರುವ ಅಸ್ಪಟ ಆಕರ್ಷಕ ಬರವಣಿಗೆ.

ದ್ರೌಪದಿ ಸ್ವಯಂವರದಲ್ಲಿ ಬಿಲ್ಲಿನ ರಹಸ್ಯ, ಯಕ್ಷ ಪ್ರಶ್ನೆ, ವಾರಣಾವತದ ಅರಗಿನ ಮನೆ, ಭೀಮನ ಪಾತಾಳಗಮನ, ಶ್ರೀ ಕೃಷ್ಣನು ಅರ್ಜುನನ ಸಾರಥಿ ಯಾದದ್ದು, ವಿದುರನ ಮನೆಗೆ ಬಂದದ್ದು ಮೊದಲಾದ ಪ್ರಸಂಗಗಳು ಪತ್ತೇದಾರಿ ಕತೆಗಳಾಗಿ ಹೊಸಗನ್ನಡದಲ್ಲಿ ಬಂದಿವೆ.

**ಪತ್ತೇದಾರಿಯ ವಿನ್ಯಾಸಗಳು**

೧. ಕಳವು, ಕೊಲೆ, ಶಂಕೆ, ಭಯಗಳಿಗೆ ಒಳಗಾದವರು ಪತ್ತೇದಾರನ ಸಹಾಯ ವನ್ನು ಬೇಡುತ್ತಾರೆ.

ಪತ್ತೇದಾರನು ತನಗೆ ಬೇಕಾದ ಮಾಹಿತಿಗಳನ್ನು ಪಡೆಯುತ್ತಾನೆ. ಅಪರಾಧ ನಡೆದ ಸ್ಥಳ, ಸಂಬಂಧಿಸಿದ ವ್ಯಕ್ತಿಗಳು, ಅಪರಾಧ ನಡೆದ ಸನ್ನಿವೇಶ ಮೊದಲಾದ ವನ್ನು ಪರೀಕ್ಷಿಸಿ ವಿಶ್ಲೇಷಿಸುತ್ತಾನೆ. ಕಾರ್ಯ, ಕಾರಣಗಳ ಕೂಲಂಕಷ ಪರೀಕ್ಷೆ ಮಾಡುತ್ತಾನೆ. ಮುಂದೆ ನಡೆಯುವ ಘಟನೆಗಳನ್ನು ಊಹಿಸುತ್ತಾನೆ, ಇಲ್ಲವೆ ಘಟನೆ ಗಳು ನಡೆಯುವಂತೆ ಮಾಡುತ್ತಾನೆ. ಕೊನೆಗೆ ಅಪರಾಧಿಯನ್ನು ಪತ್ತೆ ಹಚ್ಚುತ್ತಾನೆ.

೨. ಅಪರಾಧ ನಡೆಯಲು ಅವಶ್ಯಕವಾದ ಹಿನ್ನೆಲೆ, ಅಪರಾಧಿ ಅನುಸರಿಸುವ

ವಿಧಾನಗಳು ತಿಳಿಯುತ್ತವೆ ಅಥವಾ ಸಂಬಂಧವಿಲ್ಲದ ಘಟನೆಗಳು ನಡೆಯುತ್ತವೆ. ಅಪರಾಧಿಯಾಗಿರಬಹುದಾದವನ ಕೊಲೆಯಾಗುತ್ತದೆ. ಕೊಲೆಗಳ ಸರಪಣಿಯೇ ಸಂಭವಿಸಬಹುದು.

ಆರಕ್ಷಕರಿಗೆ ತಪ್ಪು ಗುಮಾನಿಯೇ ಸಿದ್ಧಾಂತವಾಗುತ್ತದೆ. ಪತ್ತೇದಾರನು ಘಟನೆಗಳಿಗೆ ಸಂಬಂಧಿಸಿದ ಒಬ್ಬನ/ಒಬ್ಬಳ ಪರವಾಗಿ, ಮೂಗು ತೂರಿಸಿ ಪತ್ತೆ ಕೆಲಸ ಮಾಡುತ್ತಾನೆ,

೩. ಆರಕ್ಷಕರು ಮಾಡಲಾಗದ ಕೆಲಸಗಳನ್ನು ಮಾಡಿ ತಪ್ಪಿತಸ್ಥರಿಗೆ, ನಾಯಕನೇ ದಂಡನೆ ವಿಧಿಸುತ್ತಾನೆ.

೪. ಅಪರಾಧ ಜಗತ್ತಿನ ನಾಯಕನೊಬ್ಬ ತನ್ನದೇ ಆದ ರೀತಿಯಲ್ಲಿ ಸೇಡು ತೀರಿಸಿಕೊಳ್ಳುತ್ತಾನೆ. ರಾಜಕಾರಣಿಗಳು, ಆರಕ್ಷಕರು ಆಟದ ಗೊಂಬೆಗಳಾಗಿರುತ್ತಾರೆ.

೫. ಶೀತಲ ಸಮರದ ಬೇಹುಗಾರರ ಪರಸ್ಪರ ಹೋರಾಟ. ಇವರಲ್ಲಿ ಸುಂದರಿಯರಾದ ತರುಣಿಯರು, ನಿರ್ದಯಿ ಬಾಡಿಗೆ ಕೊಲೆಗಾರರು, ಸೆಕ್ಸ್, ಥ್ರಿಲ್, ಸಸ್ಪೆನ್ಸ್‌ಗಳು ಹಿತಕರವಾದ ಮಿಶ್ರಣದಲ್ಲಿ ಮನರಂಜನೆ ನೀಡುತ್ತವೆ. ನಾಯಕ ಗೆಲ್ಲುತ್ತಾನೆ.

ಈ ವಿನ್ಯಾಸಗಳೇ ಮಾದರಿ ಅಲ್ಲ. ಇವುಗಳ ಸಂಖ್ಯೆಗೆ ಮಿತಿಯೂ ಇಲ್ಲ.

**ಪತ್ತೇದಾರಿಯ ಮಿತಿ**

ಪತ್ತೇದಾರಿ ಕತೆ ಕಾದಂಬರಿಗಳಲ್ಲಿ, ಪತ್ತೇದಾರ ಗೆದ್ದೇ ಗೆಲ್ಲುತ್ತಾನೆ. ಅಪರಾಧಕ್ಕೆ ಸಂಬಂಧಿಸಿದ ವ್ಯಕ್ತಿ ಪರಿಸರಗಳು ಮಾತ್ರ ಚಿತ್ರಿತವಾಗಬೇಕು. ಕುತೂಹಲವನ್ನು ಹೆಚ್ಚೆ ಹೆಚ್ಚಿಗೂ ಉಳಿಸಿಕೊಂಡು ಕೊನೆಯಲ್ಲಿ ರಹಸ್ಯವನ್ನು ಹೊರಗೆಡಹಬೇಕು.

ಇದರಿಂದಾಗಿ, ಜೀವನದ ಗಂಭೀರ ಸಂಘರ್ಷ, ತ್ಯಾಗ, ಮಾನವೀಯತೆ, ಅನುಕಂಪ, ಕರುಣೆ, ಇವುಗಳು ಚಿತ್ರಿತವಾಗುವುದಿಲ್ಲ. ಮನರಂಜನೆ ಮುಖ್ಯ. 'Whodunit', ಎಂಬುದೇ ಪತ್ತೇದಾರಿಯ ಮುಖ್ಯ ಪ್ರಶ್ನೆ. ಇದರಿಂದಾಗಿ ವಿಮರ್ಶಕರು 'ಪತ್ತೇದಾರಿ'ಯನ್ನು ಸಾಹಿತ್ಯ ಪ್ರಭೇದವಾಗಿ ಗಮನಿಸುವುದಿಲ್ಲ.

ಇಲ್ಲೊಂದು ಪ್ರಶ್ನೆ ಏಳುತ್ತದೆ ಸರ್ವ ಶ್ರೇಷ್ಠ ಕಾದಂಬರಿಗಳಲ್ಲೊಂದಾದ 'ಬ್ರದರ್ಸ್ ಕರಮಜೋವ್' ಪತ್ತೇದಾರಿಯ ಅಂಶಗಳನ್ನೊಳಗೊಂಡಿದೆ. ಈ

ಮೊದಲೇ ಹೇಳಿದಂತೆ ಸುಂದರ ಕಾಂಡ ಪತ್ತೇದಾರಿಯ ಎಳೆಯಲ್ಲೇ ಏನೆಲ್ಲ ಮಾಹ ತ್ತನ್ನು ಸಾಧಿಸಿದೆ. ಇದರಿಂದ ಪತ್ತೇದಾರಿಗಾಗಿಯೋ, Whodunit ಪ್ರಭೇದವಾಗಿಯೋ, ಹೊರದೊಂದು ತಂತ್ರದ. ಪರಿಸರದ, ಓದುಗರಿಗೆ ಪರಿಚಯವಿಲ್ಲದ ಒಂದು ಕಾಲ್ಪನಿಕ ಕೃತಿಯನ್ನು, ಒಂದು ವರ್ಗದ ಓದುಗರಿಗಾಗಿ, ಅವರ ಕುತೂಹಲವನ್ನು ಇಂಗಿಸಲೆಂದೇ ಬರೆದ ಸಾಹಿತ್ಯಕ್ಕೆ ಮಾತ್ರ ನಾವು ಈ ಮೊದಲು ಹೇಳಿದ ಇತಿ ಮಿತಿ ಅನ್ವಯಿಸುತ್ತದೆ.

**ಕೆಲವು ಗಮನಾರ್ಹ ಇಂಗ್ಲಿಷ್ ಪತ್ತೇದಾರಿ ಸಾಹಿತಿಗಳು :**

ಮೊದಲೇ ತಿಳಿಸಿದಂತೆ ಎಡ್ಗರ್ ಅಲೆನ್ ಪೋ ಪತ್ತೇದಾರಿಯ ಮೊದಲ ಸಾಹಿತಿ. ಪತ್ತೇದಾರ, ಅವನ ಸಹಚರ ಇವರ ಮೂಲಕ ಕತೆಯನ್ನು ಬೆಳೆಸಿ ಆಶ್ಚರ್ಯಕರವಾದ ರೀತಿಯಲ್ಲಿ ಅಪರಾಧಿಯನ್ನು ಪತ್ತೆ ಮಾಡುವ ತಂತ್ರವನ್ನು ಆವಿಷ್ಕಾರ ಮಾಡಿದವನು.

ಸರ್ ಆರ್ಥರ್ ಕಾನನ್ ಡಾಯ್ಲ್ ಪತ್ತೇದಾರಿ ಲೇಖಕರಲ್ಲಿ ಇಂದಿಗೂ ಅಗ್ರಗಣ್ಯನೆನಿಸಿಕೊಂಡು ಮತ್ತೆ ಮತ್ತೆ ಓದಿಸಿಕೊಳ್ಳುತ್ತಿದ್ದಾನೆ. ಇವನ ಪತ್ತೇದಾರ ಶೆರ್ಲಾಕ್ ಹೋಮ್ಸ್, ಅವನ ಸಹಚರ ಡಾ॥ ವ್ಯಾಟ್ಸನ್. ಇವನ ಕತೆಗಳು ಪತ್ತೇದಾರಿಯ ಕ್ಲ್ಯಾಸಿಕ್ಸ್ ವ್ಯಾಟ್ಸನ್ನನಿಗೆ ತೋಚದಿರುವ ಅಂಶಗಳು ಹೋಮ್ಸನಿಗೆ ಸರಾಗವಾಗಿ ಹೊಳೆಯುತ್ತವೆ.

'It is elementary, Watson ಎನ್ನುವುದು ಹೋಮ್ಸನ ಒಂದು ಪ್ರಸಿದ್ಧ ಹೇಳಿಕೆ.

ಹಲವಾರು ಲೇಖಕರು ಸೆಕ್ಸ್ಟನ್ ಬ್ಲೇಕ್ ಎಂಬ ಪತ್ತೇದಾರನ ಕತೆಗಳನ್ನು ಬರೆದರು.

ಹಲವಾರು ಪ್ರಸಿದ್ಧ ಪತ್ತೇದಾರಿ ಸಾಹಿತಿಗಳನ್ನು ಈ ಮೊದಲೇ ಹೆಸರಿಸಿದ್ದೇನೆ.

ನನಗೆ ಪ್ರಿಯವಾದ ಒಬ್ಬ ಲೇಖಕನ ಬಗೆಗೆ ನಾಲ್ಕಾರು ಮಾತುಗಳನ್ನು ಹೇಳುತ್ತೇನೆ.

ಪೀಟರ್ ಚೇನಿ ನನಗೆ ಅತ್ಯಂತ ಪ್ರಿಯನಾದ ಪತ್ತೇದಾರಿ ಸಾಹಿತಿ.

ಅವನು ಸೃಷ್ಟಿಸಿದ ಸ್ಲಿಂ ಕ್ಯಾಲಹನ್ (ಕೆಲಘಾನ್ ಎಂದು ಓದಿಕೊಳ್ಳುತ್ತಿದ್ದೆ. ಶ್ರೀ ವೈಎನ್ಕೆ ಅದನ್ನುಚ್ಚರಿಸುವ ವಿಧಾನ ಹೇಳಿಕೊಟ್ಟರು.) ಇವನು ನಾಬೆರಳೆತ್ತರ

ವಿಸ್ಕಿಯನ್ನು ನೇರವಾಗಿ ಕುಡಿಯುವವನು. ಇವನು ಪಿಜಿನ್ ಇಂಗ್ಲಿಷಿನ ಒಂದು ಪದ್ಯ ಹೇಳಿಕೊಳ್ಳುತ್ತಾ ಕಾರ್ ನಡೆಸುವ ಪ್ರಸಂಗ ನನಗೆ ಬಹಳ ಪ್ರಿಯವಾದದ್ದು.

'ಲೇಡೀಸ್ ವೋಂಟ್ ವೆಯ್ಟ್' ಎಂಬ ಇವನ ಕಾದಂಬರಿಯನ್ನು ನನ್ನ ಮಿತ್ರ ದಿ. ಎಚ್. ವಿ. ನಾಗರಾಜ ರಾಯರು 'ಹೆಂಗಸರಿದ್ದಾರೆ, ಎಚ್ಚರಿಕೆ' ಎಂಬ ಹೆಸರಿನಲ್ಲಿ ಕನ್ನಡಕ್ಕೆ ಭಾಷಾಂತರಿಸಿದ್ದರು. ದ್ವಿತೀಯ ಯುದ್ಧದ ಆಸುಪಾಸಿನಲ್ಲಿ ಜರ್ಮನಿಯ ಪರಮಾಣು ವಿಜ್ಞಾನಿಯನ್ನು ಅಪಹರಿಸಲು ರಷ್ಯನರು ಯತ್ನಿಸುತ್ತಾರೆ. ಅದನ್ನು ಬ್ರಿಟಿಷ್ ಏಜಂಟನೊಬ್ಬನು ವಿಫಲಗೊಳಿಸುತ್ತಾನೆ.

ಲೆಮ್ಮಿ ಕಾಷನ್, ಚೇನಿಯವರ ವಿಶಿಷ್ಟ ಪಾತ್ರ. 'ಅಮೆರಿಕ್ಯಾನೀಸ್ ಇಂಗ್ಲಿಷ್' ಮಾತನಾಡುವ ಅವನು, ತಳಬುಡವಿಲ್ಲದ ಘಟನೆಗಳಲ್ಲಿ ಭಾಗವಹಿಸುತ್ತಾ, ತನ್ನ ರಹಸ್ಯವನ್ನು ಎಲ್ಲರಿಗೂ ಹೇಳುತ್ತಾ ಹೇಳುತ್ತಾ, ಕೊನೆಗೆ ತನ್ನ ಗುರಿ ಸಾಧಿಸುತ್ತಾನೆ.

ಜೇಮ್ಸ್‌ಹ್ಯಾಡ್ಲಿ ಚೇಸ್ ಮತ್ತೊಬ್ಬ ಸುಪ್ರಸಿದ್ಧ ಪತ್ತೇದಾರಿ ಸಾಹಿತಿ. ಅನೇಕ ಸಾಹಿತ್ಯ ಪ್ರಿಯರಿಗೆ ಮೆಚ್ಚುಗೆಯಾದವನು. ಅವನ ಕಥನ ಕಲೆಯನ್ನು ಮೆಚ್ಚುವವರು ಹಲವರಾದರೆ, ಅವನ ಬರವಣಿಗೆಯಲ್ಲಿ 'ಋತು ಪ್ರಜ್ಞೆ'ಯನ್ನು ಶಂಕರ ಮೊಕಾಶಿ ಯವರು ಗುರುತಿಸುತ್ತಾರೆ. ಚೇಸನ ಬರಹಗಳು ನನಗೇನೂ ಹಿಡಿಸಿಲ್ಲ.

ಹಿಚ್‌ಕಾಕ್, ಸಿಡ್ನಿ ಷೆಲ್ಡನ್ ಮತ್ತು ಫ್ರೆಡ್ರಿಕ್ ಫಾರ್‌ಸಿತ್ ಇವರ ಸಸ್ಪೆನ್ಸ್ ಕೃತಿಗಳು ಗಮನ ಸೆಳೆಯುವಂತಹವು.

ಅಪರಾಧದ ಭೂಗತ ಜಗತ್ತಿನ ವಾಸ್ತವಿಕ(?) ಚಿತ್ರವನ್ನೂ, 'ಆ' ಬೇರೊಂದು ಜಗತ್ತನ್ನೂ ತೆರೆಯುವ ಮಾರಿಯೊ ಪೂಜೋ ಅವರ 'ದಿ ಗಾಡ್‌ಫಾದರ್' ಗಮನಾರ್ಹವಾದ ಕೃತಿ.

ಇಯಾನ್ ಫ್ಲೆಮಿಂಗ್‌ನ ಜೇಮ್ಸ್ ಬಾಂಡ್ ಕಾದಂಬರಿಗಳು ಪುಸ್ತಕಗಳಾಗಿ, ಸಿನಿಮಾಗಳಾಗಿ ಅಪಾರ ಮೆಚ್ಚುಗೆ ಗಳಿಸಿವೆ. ನನ್ನ ವಿಮರ್ಶಕ ಮಿತ್ರರೊಬ್ಬರು ತಮ್ಮ ಮಿತ್ರರಾದ ಸಾಹಿತಿ ಸಂಪಾದಕರೊಬ್ಬರನ್ನು ಕುರಿತು 'ಅವರೀಗ ಜೇಮ್ಸ್ ಬಾಂಡ್ ಓದುತ್ತಾರೆ' ಎಂದು ಹೀಯಾಳಿಕೆಯ ದನಿಯಲ್ಲಿ ಹೇಳಿದ್ದರು.

ಪತ್ತೇದಾರಿ ಸಾಹಿತ್ಯಕ್ಕೂ, ಭವಿಷ್ಯಕ್ಕೂ ಒಂದು ಹೋಲಿಕೆ ಇದೆ. ಅವನ್ನು ಕುರಿತು ಬಹಿರಂಗವಾಗಿ ದೂಷಿಸುವವರು ಒಳಗೊಳಗೇ ಅವುಗಳನ್ನು ಕುರಿತ ಅಪಾರ ಪ್ರೀತಿಯುಳ್ಳವರಾಗಿರುತ್ತಾರೆ.

(ಸಶೇಷ)

# ನಮ್ಮ ಜನ – 1

(ವೈಜ್ಞಾನಿಕ ವಿವೇಚನೆ)

ಜಿ. ಎಸ್. ಜಿ.

---

ಇದು ಸ್ವಾನುಭವದ ಪಾಕ. ಅನುಭವ ಮೂರು ದಶಕಗಳದ್ದು. ಕೊರೆದದ್ದನ್ನೇ ಕೊರೆದು, ಹಲವು ಸಲ ಭೈರಿಗೆಯ ಮೊನೆಯನ್ನೇ ಬದಲಾಯಿಸಿ, ಸೋತು, ಭೈರಿಗೆಯನ್ನೇ ಬದಲಾಯಿಸಿ, ಕೊರದ ಕೊರಕನ ಫಲಶ್ರುತಿ ಕಲಿತುಕೊಳ್ಳುವವನು ಕಲಿಯಲಾರದ್ದನ್ನು ಕಲಿಸುವವನೇ ಕಲಿತಾಗ ಅಂದರೆ ಭೈರಿಗೆ Recoil ಆದಾಗ ಆದ ಅನುಭವ.

ಹಲವು ವಸ್ತುಗಳಲ್ಲಿ ರಾಸಾಯನಿಕವಾಗಿ ಮೂರು ವಿಧ ಎಂದಾಗ ವಿಧಕ್ಕೂ, ಸ್ಥಿತಿಗೂ ಇರುವ ವ್ಯತ್ಯಾಸವನ್ನು ತಿಳಿಯದವರು "ಮೂರಲ್ಲಯ್ಯಾ, ನಾಲ್ಕು !" ಎಂದು ನನ್ನನ್ನು ತಿದ್ದಿದಾಗ, ನಾನು "ನಾಲ್ಕಲ್ಲ, ಐದು !" ಎಂದು ಅವರನ್ನೇ ಕೆಣಕಿದ್ದೇನೆ.

ಹಳೆಯ ತಲೆಮಾರಿನವರು ಸ್ಥಿತಿಗಳನ್ನು ಘನ, ದ್ರವ, ಅನಿಲ ಎಂದರೆ ಈಗಿನವರು ಜತೆಗೆ ಅಯಾನಿಕ್ (Ionic or plasma) ಸ್ಥಿತಿಯನ್ನೂ ಸೇರಿಸಿ, ನಾಲ್ಕೆನ್ನುತ್ತಾರೆ. ಆಗ ನಾನು ವೇದ, ಉಪನಿಷತ್ತುಗಳ ಮೊರೆ ಹೊಕ್ಕು, ಪೃಥವೀ ಆಪಃ ವಾಯುಃ ತೇಜಸ್ಸು ಆಕಾಶಃ ಎಂದು ಐದನೆಯದಾಗಿ ಆಕಾಶ (Space) ಸೇರಿಸುತ್ತೇನೆ.

ಆಕಾಶ ಸ್ಥಿತಿಗ ಸೇರತ್ತೋ ಬಿಡತ್ತೋ ಎಂಬುದು ಜಿಜ್ಞಾಸೆ. ಪಂಚ ಭೂತಗಳಲ್ಲಿ ಆಕಾಶವೂ ಇರುವುದರಿಂದ ಅದೂ ಒಂದು ಸ್ಥಿತಿ ಎಂದು ನನ್ನ ವಾದ, ಆದರೆ, ಆಕಾಶದಲ್ಲೇ ಇರುವ ಭೂತಗಳನ್ನೇ ಕೇಳಿದರೆ ಒಳಿತು. ಅರಬರನ್ನು ಆಕಾಶಕ್ಕೆ ಸೇರಿಸುತ್ತಿರುವ, ಉಳಿದವರನ್ನೂ ಅತಂತ್ರರನ್ನಾಗಿ ಮಾಡುತ್ತಿರುವ 'ಬುಷ್' ಅಥವಾ 'ಸದ್ದಾಂ' ಅವರನ್ನು ಕೇಳಬೇಕು. ಅವರು ಈಗ ಸಿಗುವ ಹಾಗಿಲ್ಲ. ಅವರಿವರನ್ನು ಕೇಳುವುದಕ್ಕಿಂತ ಆಕಾಶ (Space ನೆನಪಿರಲಿ) ದಲ್ಲೇ ಆನಂದವಾಗಿರುವ ನಮ್ಮವರನ್ನೇ ಕೇಳಬಹುದಲ್ಲ! ಯಾರು ಈ ನಮ್ಮವರು ? ಜನತಾ (S), ಜನತಾ ದಳ, ಜನತಾ, ಕಾಂಗ್ರೆ ಎಂದು ಮಾರಕೋತಿ ಆಡುತ್ತಿರುವವರನ್ನು ಕೇಳಿದರೂ ಆದೀತು. ಅವರು

ಸ್ವಾನುಭವಿಗಳು. ಹಲವು ಮರಗಳ ನಡವೆಯೋ ಅಂತರಿಕ್ಷದಲ್ಲೇ ಬಹಳ ಕಾಲದಿಂದ ಇರುವವರು, ಇದ್ದವರು. ಅಲ್ಲಿ ಸಲ್ಲದೇ, ಇಲ್ಲೂ ಸಲ್ಲದೇ, ಅಂತರಿಕ್ಷದಲ್ಲೇ ಹಾರಾಡುತ್ತಾ, Safe landing positionಗೆ ಕಾಯುತ್ತಿರುವವರು. ಯಾರೂ ಬೇಡ. "ದೊಡ್ಡಪ್ಪನವರನ್ನೇ ಕೇಳಬಹುದು. ಅವರು ವಯೋವೃದ್ಧರು. ಅನುಭವಿಗಳು, ಸದಾ ಅಂತರಿಕ್ಷದಲ್ಲೇ ಇರುವವರು. ಹಲವರನ್ನು ಮರ ಹತ್ತಿಸಿ, ಇಳಿಸಿ, ಈಗ ಹತ್ತಿಸಿದವರನ್ನು ಇಳಿಸಲು ಕಾಯುತ್ತಿರುವವರು.

ವಸ್ತುಗಳ ಸ್ಥಿತಿಯಿಂದ ಹಲವು ರಾಸಾಯನಿಕ ವಸ್ತುಗಳ ವಿಧಗಳಿಗೆ ಬಂದಾಗ ಅವನ್ನು ಜಲಾಕರ್ಷಕ, ಜಲ ವಿಮೋಚಕ ಎಂದು ಕನ್ನಡದಲ್ಲಿ ವಿಭಾಗಿಸಿದರೂ ಇಂಗ್ಲಿಷ್‌ನಲ್ಲಿ Hygroscopic deliquescent ಮತ್ತು Efflorescent ಎಂದು ಮೂರಾಗಿ ಮಾಡುತ್ತಾರೆ.

ಈ Hygroscopic ವಸ್ತುಗಳು ತಮ್ಮ ಆಸುಪಾಸಿನ ನೀರನ್ನು ಹೀರಿಕೊಂಡರೂ ತಮ್ಮ ಭೌತಿಕ ಸ್ಥಿತಿಯನ್ನು ಕಳೆದುಕೊಳ್ಳುವುದಿಲ್ಲ. ಅವು ನೀರನ್ನು ಹೀರಿಕೊಂಡರೂ ತಾವು ಇದ್ದಂತೆಯೇ ಇರುತ್ತವೆ. ಉದಾಹರಣೆಗೆ ಗಂಧಕಾಮ್ಲ, ಪಟಿಕ (Alum) ಇತ್ಯಾದಿ.

ನಮ್ಮಲ್ಲಿ ಕೆಲವರು Hygroscopic ಜನರಿದ್ದಾರೆ. ಇವರನ್ನು ಬುದ್ಧಿಜೀವಿಗಳು ಎನ್ನುತ್ತಾರೆ. ಇಂಗ್ಲಿಷ್‌ನಲ್ಲಿ Intelligentsia ಎನ್ನಬಹುದು. ಇವರು ಸ್ಥಿತಪ್ರಜ್ಞರು. ಇವರ ಪ್ರಜ್ಞೆಯ ಸ್ಥಿತಿ ಅಚಲ, ಅಬಾಧಿತ. ಆದರೆ ಪ್ರಜ್ಞಾಶೂನ್ಯರಲ್ಲ; ಅದಕ್ಕೇನೇ ಇವರು ಸ್ಥಿತಪ್ರಜ್ಞರು. ಬೇಕಾದರೆ ಮಧ್ಯಮ ವರ್ಗದ ಜನ ಎನ್ನಿ. ಈ ಅಭಿದಾನ ಅಸಮಂಜಸ ಎಂಬ ಅನುಮಾನ.

ಇವರು ಅಂತರಂಗದಲ್ಲಿ (Closed quarters) ರಾಮಜನ್ಮಭೂಮಿ, ಪಕ್ಷಾಂತರ, ಮಂಡಲ ವರದಿ, ರಾಜಕೀಯದ ಆಗುಹೋಗುಗಳ ವಿಷಯವಾಗಿ ನಿರರ್ಗಳವಾಗಿ ಚರ್ಚಿಸುತ್ತಾರೆ. ಭಾಷಣ ಬಿಗಿಯುತ್ತಾರೆ, ವಿಮರ್ಶೆ ಮಾಡುತ್ತಾರೆ. ಗಲ್ಫ್‌ನಲ್ಲಿ ಇದ್ದವರಿಗಿಂತಲೂ ಹೆಚ್ಚಾಗಿ ಅಲ್ಲಿನ ವಿಷಯ ಇವರಿಗೆ ಗೊತ್ತು. ವರಮಾನ ತೆರಿಗೆ, Inflation, ಕ್ರಿಕೆಟ್ಟು, ನಾಟಕ, ಸಿನಿಮಾ, T. V., ಸಂಗೀತ, ಎಲ್ಲದರ ಪ್ರಭಾವವೂ ಇವರಿಗಿದೆ. ಶಂಕರನಾರಾಯಣರನ್ನು ಇವರು ಬೆಂಬಲಿಸುವುದಿಲ್ಲ. "ತಣ್ಣಗೆ ಎರಡು ವರ್ಷ ಕಳೆಯೋದು ಬಿಟ್ಟು ಹೀಗೆ ಮಾಡಿಕೋಬಾರದಿತ್ತು" ಎಂದು ಅನುಕಂಪ ಪಡುತ್ತಾರೆ. ಆದರೂ ಇವರು ಸ್ಥಿತಪ್ರಜ್ಞರು. ಇದ್ದಲ್ಲೇ ಇದ್ದಂತೆ ಇರುವವರು. ಕ್ರಾಂತಿಯ ಮಾತನಾಡುತ್ತಾರೆ. ಹೊರಗೆ ನಾಯಿ ಬೊಗಳಿದರೆ ಬಾಗಿಲ ಬೋಲ್ಟು ಜಡಿಯುತ್ತಾರೆ, ಬೆಳಿಗ್ಗೆ ಆಫೀಸಿಗೆ ಬಸ್ಸು ಕಾಯುವುದು

ತಪ್ಪುವುದಿಲ್ಲ. ಸಂಜೆ ವಿಹಾರ ತಪ್ಪುವುದಿಲ್ಲ. Petrol crisis ಬಗ್ಗೆ ಮಾತನಾಡು ವುದು ತಪ್ಪುವುದಿಲ್ಲ. ಹತ್ತಿರದ ಅಂಗಡಿಗೆ ಸ್ಕೂಟರಿನಲ್ಲಿ ಹೋಗುವುದು ತಪ್ಪುವು ದಿಲ್ಲ. ಈ ಜಾಯಮಾನದವರೇ Hygroscopic ಜನರು.

ಎರಡನೆಯದು Deliquescent ವಸ್ತುಗಳು. ಇವು ಆಸುಪಾಸಿನ ನೀರನ್ನು ಹೀರಿಕೊಂಡು ತಾವೂ ದ್ರವವಾಗಿ ಬಿಡುತ್ತವೆ. ಉದಾಹರಣೆ ಸೋಡಿಯಂ ಹೈಡ್ರಾ ಕ್ಸೈಡ್, ಕೋಬಾಲ್ಟ್ ಕ್ಲೋರೈಡ್. ಇತ್ಯಾದಿ.

ಕೆಲವರನ್ನು Deliquescent ಜನರು ಎನ್ನಬಹುದು. ಅವರನ್ನು ನೀವು Deliquent ಎಂದರೆ ಅದು ನಿಮಗೆ ಬಿಟ್ಟದ್ದು, ಇವರು ಕಾಲ ಪ್ರವಾಹದಲ್ಲಿ ಒಂದಾಗಿ ಬದುಕುತ್ತಾರೆ. ಬದುಕನ್ನು ಬಲ್ಲವರು. ಇವರನ್ನು ಪುಢಾರಿಗಳು ಎನ್ನ ಬಹುದು! ಆದರೆ ಈ ವರ್ಗದಲ್ಲಿ ಪುಢಾರಿಗಳು ಮಾತ್ರವಲ್ಲ ಬೇರೆಯ ಕೆಲವರೂ ಇರುತ್ತಾರೆ. ಆಳುವವನ ಆಳಾಗಿ ಅವನ ಆಣತಿಯಂತೆ ದುಡಿದು ಆತ್ಮಸಾಕ್ಷಿಯನ್ನು ಮರೆತು ದೇಹವನ್ನೇ ಬೆಣ್ಣೆಯಾಗಿ ಮಾಡಿಕೊಳ್ಳುವ, ಮಾರಿಕೊಳ್ಳುವ ಕೆಲವರು ಪುಢಾರಿಗಳಲ್ಲ.

ಈ ವರ್ಗದ ಜನ ಅಂತರಿಕ್ಷದಲ್ಲಿರುವವರನ್ನು ಹೋಲುತ್ತಾರೆ. ಪರಮ ಸುಖಿ ಗಳು ಇವರು. ಇವರಿಗೆ ಪ್ರವಾಹದ ವಿರುದ್ಧ ಈಜಿ ಗೊತ್ತಿಲ್ಲ. ಆದರೆ ಈಜು ಬಲ್ಲವರು.

Hygroscopic ಜನರನ್ನು ಇವರೊಡನೆ ಹೋಲಿಸಿದರೆ Hygroscopic ಜನರು ಈಜುವುದರ ವಿಷಯವಾಗಿ Thesis ಬರೆಯಬಲ್ಲರು. ಆದರೆ ಈಜುವುದು ಇವರಿಗೆ ಗೊತ್ತಿಲ್ಲ. ಈಜುವುದರ ವಿಷಯವಾಗಿ ವ್ಯಾಖ್ಯಾನ ಕೊಡುವವರು. ದಡ ದಲ್ಲಿ ನಿಂತು ಈಜುವವನಿಗೆ ನಿರ್ದೇಶನ ಕೊಡಬಲ್ಲರು. ಕಾಮೆಂಟರಿ ಕೇಳಿ ಕ್ರಿಕೆಟ್ಟಿನ ಬಗ್ಗೆ ಕ್ರಿಟಿಸೈಸ್ ಮಾಡಿದ ಹಾಗೆ.

ಆದರೆ Deliquescents ಜನರು ಕಾಲ ಪ್ರವಾಹದ ನೀರದಲ್ಲೇ ಈಜಿ ದಡ ಸೇರುವವರು. ಇವರು ಭಾಷಣ ಪ್ರಿಯರಲ್ಲ, ಪಂಡಿತರಲ್ಲ, ಕಸಬುದಾರರು. ಸ್ವಹಿತ, ಸಮಯ ಸಾಧಕರು. ಇವರಿಗೆ ಪಕ್ಷ ಭೇದ, ಜಾತಿ ಭೇದಗಳಿಲ್ಲ. ಎಲ್ಲವೂ ಬ್ರಹ್ಮಮಯ. ಆ ಬ್ರಹ್ಮ ಇವರೇ. ಸಮಯಕ್ಕೆ ತಕ್ಕಂತೆ ಬಣ್ಣ ಬದಲಾಯಿಸಿ ಕೊಳ್ಳುತ್ತಾ ಬದುಕಬಲ್ಲವರು. ಬದುಕನ್ನು ಅರಿತವರು.

Hygroscopic ಜನರು Deliquescent ಜನರಿಂದ ತಮ್ಮ ಕೆಲಸಗಳನ್ನು

ಸಾಧಿಸಿಕೊಳ್ಳುತ್ತಾರೆ. ಆದರೆ Deliquescent ಜನರು ಎಂದೂ ಪುಗಸಟ್ಟೆ ಕೆಲಸ ಮಾಡಿಕೊಡುವುದಿಲ್ಲ.

Deliquescent ಜನರು ಕ್ರಾಂತಿಕಾರಿಗಳಲ್ಲ. ಕ್ರಾಂತಿ – ಕ್ರಾಂತಿಕಾರಿಗಳ ಹಿಂದೆ ಇರುವವರು.

ಇನ್ನು ಮೂರನೆಯದು— Efflorescent ವಸ್ತುಗಳು. ಇವು ತಮ್ಮಲ್ಲಿರುವ ನೀರನ್ನು ಕಳೆದುಕೊಂಡು, ಬಣ್ಣಗೆಟ್ಟು, ಸ್ಥಿತಿಗೆಡುತ್ತವೆ. ಉದಾಹರಣೆ ಫೆರಸ್ ಸಲ್ಫೇಟು ಹರಳುಗಳು. "ಪಚ್ಚೆ"ಯನ್ನು ಹೋಲುವ ಈ ಸುಂದರ ಹರಳುಗಳನ್ನು ಗಾಳಿಗೆ ತೆರೆದಿಟ್ಟಾಗ ಇವು ತಮ್ಮಲ್ಲಿರುವ ನೀರನ್ನು (ಸತ್ವ) ಕಳೆದುಕೊಂಡು, ಕಳೆಗುಂದಿ, ಬಣ್ಣಗೆಟ್ಟು ಕಂದು ಬಿಳಿಯ ಬಣ್ಣದ ಪುಡಿಯಾಗುತ್ತವೆ.

ಆದರ್ಶ, ನೀತಿ. ರೀತಿಗಳಿಗೆ ಕಟ್ಟುಬಿದ್ದು, ಇದ್ದದ್ದನ್ನೆಲ್ಲಾ ಕಳೆದುಕೊಂಡು ಹಾಳಾಗುವ ಜನರನ್ನು Efflorescent ಜನರು ಎನ್ನಬಹುದು. ಈಗ ಇವರು ವಿರಳ. ಕಾಲ ಪ್ರವಾಹದ ವಿರುದ್ಧ ಈಜುವವರು. Hygroscopic ಜನರು ಇವರನ್ನು ಅಪಹಾಸ್ಯ ಮಾಡಿದರೆ Deliquescent ಜನರು ಇವರನ್ನು ಉಪಯೋಗಿಸಿಕೊಂಡು ಇವರು ಸಂಪೂರ್ಣವಾಗಿ ಬಣ್ಣಗೆಟ್ಟ ಮೇಲೆ ಇವರನ್ನು ಕೈ ಬಿಡುತ್ತಾರೆ. ಈ Efflorescent ಜನರು ಕಾಲ ಪ್ರವಾಹದ ವಿರುದ್ಧ ಈಜಿ, ಬಸವಳಿದು ಆನಂತರ ಅಂತರಿಕ್ಷದಲ್ಲಿ ಲೀನವಾಗುತ್ತಾರೆ.



## ಅನರ್ಘ ಕೋಶ

ನಾ. ಕ.

ಮಾರುಕ :– ಎರಡು ವಿಧ; ತಾಯಿ ಮಾರುಕ, ಬಾಯಿ ಮಾರುಕ
ಶ್ವಶುರ ಋತು :– ಮಾವನ ಮನೆಯಲ್ಲೇ ಬಿಡಾರ ಹೂಡೋಣವೆನಿಸುವ ಕಾಲ
Shun-ಮುಖಿ :– ಮುಖ ನೋಡ ಬಾರದು ಎನಿಸುವವ
ಪರಾಯಿ :– ಕಾಲು ಕುಪ್ಪಸ
She ಯಾಳಿಸಿ :– ಓಯಾಳಿಸಿ ಎಂಬುದರ ಸ್ತ್ರೀ ಲಿಂಗ

# ತೋಳ – ಕುರಿ ಮರಿ

**ಕಪಟಕವಿ**

---

ಅರಬ ದೇಶದ ಮಧ್ಯದೊಳಗೆ
ಇರುವಿರಾಕೆಂಬ ರಾಷ್ಟ್ರದಲ್ಲಿ
ಹಿರಿಯ ಪಾಳೆಯಗಾರನಾ ಕಥೆ
ಕೊರೆದು ನಾನಿಂತು ಪೇಳ್ವೆನು ೧

ತೈಲದಿಂ ಬಹ ಧನದ ರಾಶಿಯ
ಬಲಿಷ್ಠ ದೇಶದ ಜನಕೆ ತೆತ್ತು
ಎಲ್ಲ ತರಹದ ಅಸ್ತ್ರಗಳನೂ
ಗಳಿಸಿ ನಗುತಲಿ ಕುಳಿತನು ೨

ದೊಡ್ಡ ರಾಷ್ಟ್ರಗಳಲ್ಲಿ ಹಿಗ್ಗುತ
ಮೆದ್ದು ಹಣವನು ತಿಂದು ತೇಗುತ
ಯುದ್ಧದಾ ಹಿರಿ ಆಯುಧಗಳನು
ಕೊಡುತ ಬಂದರಿರಾಕಿಗೆ ೩

ಹುಸೇನನ ಭೂ ದಾಹ ಹೆಚ್ಚಲು
ಹಸುಳೆ ಕುವೈತನ್ನುಂಗಿ ತಾನು
ಹುಸಿಯ ನುಡಿದು ನಮ್ಮದೇ ಎಂದ
ಭ್ರಷ್ಟನಾ ಪಾಳೆಗಾರನು ೪

ಜಗದ ದೇಶಗಳೆಲ್ಲ ಕೆರಳಿ
ಮಿಗವೆ ಬಿಡು ನೀನು ಕುವಯತನ್ನು
ಹೀಗೆ ನೀನೀ ಹಠವ ಹಿಡಿದರೆ
ಹಗೆಗಳಾಗುವೆವೆಲ್ಲರು ೫

ಇರಾಕಿನಾ ದುಷ್ಟ ಪಾಳೆಗಾರನು
ಇರಲಿ ಏನೇ ಬರಲಿ ನಾನು
ಹೊರಗೆ ಹೋಗೆನು ಇಲ್ಲಿಂದೆನುತ
ಹರಡಿದನು ತನ್ನ ಸೈನ್ಯವ ೬

ಯು ಎಸ್ಸ್ ಯು ಕೆಗಳೆರಡು ಸೇರಿ
ಕೊಯಲಿಷನ್ ಸೈನ್ಯವನ್ನು ಸಾರಿ
ಯು ಎನ್ ಸಮ್ಮತಿಯಲ್ಲಿ ಬಂದುದು
ಯೂ ಏ ಇ ಜನ ಬೆದರಿತು ೭

ಸಮರ ಕಹಳೆಯನ್ನು ಊದುತ
ನಮ್ಮದೇ ಜಯವೆಂದು ಕೂಗುತ
ವಿಮಾನ ದಾಳಿ ಸಿದ್ಧವಾಯಿತು
ದಮನ ಮಾಡಲಿರಾಕನು ೮

ಇತ್ತ ಸಿ ಎನ್ನೆನ್ ಹೆಸರಿನ
ಸುತ್ತ ಚಲಿಸುವ ದೂ. ದ. ಕೇಂದ್ರವು
ಬಿತ್ತರಿಸಿತು ಸಂಜಯನ ತೆರದಿ
ವಾರ್ತೆಗಳನೆಡೆಬಿಡದೆಯೆ ೯

ಹಲ್ಲು ಕಡಿಯುತ ಹಗೆ ರಾಷ್ಟ್ರಗಳೆ
ರಲಿ ಶಾಸ್ತಿಯ ಮಾಡುವವೆನುತ
ಬಲವಾದ ಬಾಂಬ್ ಕ್ಷಿಪಣಿಗಳನು
ಛಲದಿ ಎಸೆದವು ಭೂಮಿಗೆ ೧೦

ಮುಂದೆ ಆಗುವುದಾರು ಬಲ್ಲರು ?
ಅಂಥ ಧರ್ಮದಿ ನೀತಿ ನಿಯಮದ
ಗಂಧವಿಲ್ಲವು ಎನುತ ಜಗವೇ
ಕುಂದಿ ನೋಡುತ ಕುಳಿತಿದೆ ! ೧೧

Statement about ownership and other particulars about newspaper "APARANJI" to be published in the first issue every year after the last day of February.

## FORM IV

(See Rule 8)

| | | | |
|---|---|---|---|
| 1. | Place of Publication | – | Bangalore |
| 2. | Periodicity | – | Monthly |
| 3. | Printer's Name | – | V. R. Nath |
| | Nationality | – | Indian |
| | Address | – | 404, Sampige Road<br>Malleswaram<br>Bangalore 560 003 |
| 4. | Publisher's Name | – | M. Shivakumar |
| | Nationality | – | Indian |
| | Address | – | Aparanji Karyalaya<br>36, 6th Main Road<br>Malleswaram<br>Bangalore 560 003 |
| 5. | Editor's Name | – | M. Shivakumar |
| | Nationality | – | Indian |
| | Address | – | Aparanji Karyalaya<br>36, 6th Main Road<br>Malleswaram<br>Bangalore 560 003 |
| 6. | Name and Address of individuals who own the newspaper and partners or shareholders holding more than one per cent of the total capital | – | M. Shivakumar<br>Sole Proprietor<br>Aparanji Karyalaya<br>36, 6th Main Road<br>Malleswaram<br>Bangalore-560 003 |

I, M. Shivakumar, hereby declare that the particulars given above are true to the best of my knowledge and belief.

~~28th February 1991~~
1st March 1992

M. SHIVAKUMAR
Publisher

## ಮಾಸ್ ಕಾಟ್ ಆಗ್ರೋ ಕೆಮಿಕಲ್ಸ್
## ಪ್ರೈವೇಟ್ ಲಿಮಿಟೆಡ್

93, 3ನೇ ಘಟ್ಟ,
ಪೀಣ್ಯ ಇಂಡಸ್ಟ್ರಿಯಲ್ ಏರಿಯಾ,
ಬೆಂಗಳೂರು–560 058.

ದೂರವಾಣಿ 395902 ತಂತಿ 'ಮಾಸ್ ಕಾಟ್' ಟೆಲೆಕ್ಸ್ -845-580

ಭತ್ತ, ಕಬ್ಬು ಮತ್ತು ಗೋಧಿಯ ಬೆಳೆಗಳಲ್ಲಿ ಕಳೆ ನಿಯಂತ್ರಣ ಮಾಡುವುದಕ್ಕೆ "ನಾಕ್ವೀಡ್" ಕಳೆನಾಶಕವನ್ನು ಉಪಯೋಗಿಸಿರಿ.

---

ಶುಭಾಶಯಗಳೊಂದಿಗೆ :–



## ಎನ್. ಎಸ್ ಗಿರಿಮಾಜಿ ಅಂಡ್ ಸನ್ಸ್
## [ಬೆಂಗಳೂರು]

ನಂ. 46, ಇಂಡಸ್ಟ್ರಿಯಲ್ ಸಬರ್ಬ್
ಯಶವಂತಪುರ, ಬೆಂಗಳೂರು–560 022.

REGISTERED No. BGW-180

ಶುಭಾಶಯಗಳೊಂದಿಗೆ

ಟರ್ನ್-ಕೀ ಕನ್ ಸ್ಟ್ರಕ್ಷನ್ಸ್
(ಪ್ರೈ.) ಲಿಮಿಟೆಡ್
11ನೇ ಮೇನ್ ರಸ್ತೆ
ಮಲ್ಲೇಶ್ವರಂ
ಬೆಂಗಳೂರು-560 003.

ಫೋನ್ 364118

Printed by V R. NATH for the Publisher M SHIVA KUMAR, Published and owned by M SHIVA KUMAR, 36, 6th Main Road, Malleswaram, Bangalore-560 003 Printed at IMPRESSIONS, 404, Sampige Road, Malleswaram, Bangalore-560 003 Editor . M SHIVA KUMAR